# ಜೀವನಾದ

ಕೃಷ್ಣಮೂರ್ತಿ ಪುರಾಣಿಕ

ಇದು ಸುದರ್ಶನ ಬಿಡಿ ಮುತ್ತು

ಸುದರ್ಶನ ಪ್ರಕಾಶನ
ತಾರಾನಿವಾಸ : : ತಿಪಟೂರು

# ಪ ರಿ ವಿ ಡಿ

# ಅರಿಕೆ

ನನ್ನ ಮಿತ್ರರೂ, ಸುದರ್ಶನ ಪ್ರಕಾಶನದ ಮಾಲಿಕರು, ಕಾವ್ಯ ಪಕ್ಷಪಾತಿಗಳೂ ಆದ ಶ್ರೀ ತಾ.ರಾ. ನಾಗರಾಜರು ಮತ್ತು ಶ್ರೀಮತಿ ಶಕುಂತಲ ನಾಗರಾಜರವರು ಈ ಕವನ ಸಂಗ್ರಹವನ್ನು ಪ್ರಕಟಿಸುತ್ತಿರುವದು ಸಂತೋಷದ ಮಾತಾಗಿದೆ. ಶ್ರೀ ನಾಗರಾಜರು ಮತ್ತು ಶ್ರೀಮತಿ ಶಕುಂತಲ ನಾಗರಾಜರು ಕಾದಂಬರಿ ಪ್ರಿಯರಾಗಿರುವಂತೆ, ಕಾವ್ಯ ಪ್ರಿಯರೂ ಆಗಿರುವದಕ್ಕೆ ಇದು ನಿದರ್ಶನವಾಗಿದೆ.

ಈ 'ಜೀವನಾದ'ದಲ್ಲಿ ಬಂದ ನಾಲ್ಕು ಕವನಗಳು, ಪ್ರಬುದ್ಧ ಕರ್ಣಾಟಕ, ಜಯಂತಿ, ಕರ್ಮವೀರಗಳಲ್ಲಿ ಈ ಮೊದಲು ಬೆಳಕು ಕಂಡಿವೆ,

ನನ್ನ ಕಾದಂಬರಿಗಳಿಗೂ, ಸರಳರಗಳೆಯ ನಾಟಕಗಳಿಗೂ ಇತ್ತ ಪ್ರೋತ್ಸಾಹವನ್ನು ಈ ಕೃತಿಗೂ ನನ್ನ ವಾಚಕ ಬಳಗವು ಈಯುವದೆಂದು ನಂಬಿದ್ದೇನೆ.

ಸಾಹಿತ್ಯ ಸೇವಾ ಮಂದಿರ
ಗೋಕಾಕ
೧೯೫೬

**ಕೃಷ್ಣಮೂರ್ತಿ ಪುರಾಣಿಕ.**

# ಕನ್ನಡ ಕಂದರಿಗೆ

೧

ಹಾರುತಲಿದೆ ಕನ್ನಡ ಗುಡಿ
ಸಿರಿ ಹೆಮ್ಮೆಯ ತೋರಿ
ತೋರುತಲಿದೆ ಕನ್ನಡ ನುಡಿ
ಸವಿ ಕಂಪನು ಬೀರಿ

೨

ಕನ್ನಡ ನುಡಿಯೊಳು ಹಾಲಿನ ರುಚಿಯಿದೆ
ಜೇನಿನ ಸವಿಯಿದೆ ಬನ್ನಿರಲೆ !
ಕನ್ನಡ ನುಡಿಯೊಳಗೆಲ್ಲವು ತುಂಬಿದೆ
ಕಂದರು ನೀವೈತನ್ನಿರಲೆ !

೩

ಕತೆಗಳ ಹೊಳೆಯೊಳಗೀಜಲು ಬನ್ನಿರಿ
ಕಾವ್ಯರಸವನೇ ಕುಡಿಕುಡಿದು
ರಂಗಸ್ಥಳದೊಳು ನಾಟಕವಾಡಿರಿ
ತಾಳಮದ್ದಲೆಯ ಹಿಡಿಹಿಡಿದು

೪

ಕನ್ನಡ ನಾಡಿನ ಪುಣ್ಯಸ್ಥಳದೊಳು
ಯಾತ್ರಿಕರಾಗಿಹ ನೀವೆಲ್ಲ
ಕನ್ನಡ ತಾಯಿಯ ಮನ್ನಣೆ ಮಕ್ಕಳು
ಧನ್ಯರಾದಿರೋ ನೀವೆಲ್ಲ

೫

ಕನ್ನಡ ನುಡಿಯೇ ಜೀವನ ಮಿಡಿಯಲಿ
ಕನ್ನಡತನವೇ ಕೆಚ್ಚಾಗಿ
ಧನ್ಯತೆ ಪಡೆಯಲಿ ಬೆಳಕನು ತೋರಲಿ
ಕನ್ನಡನಾಡೇ ನಿಮಗಾಗಿ

೬

ಹಾರುತಲಿದೆ ಕನ್ನಡ ಗುಡಿ
ಹಿರಿ ಹೆಮ್ಮೆಯ ತೋರಿ
ತೋರುತಲಿದೆ ಕನ್ನಡ ನುಡಿ
ಸವಿ ಕಂಪನು ಬೀರಿ

# ಭಾವ ಬಂಧ

೧

ಚೆಂದಕೆಲ್ಲಿ ಬಂತು ಛಂದ
ಭಾವ ಜೀವಕೆ
ಹೊಂದಿಕೊಂಡು ಬಂದರಂದ
ಛಂದ ಕವಿತೆಗೆ

೨

ಸಾವು ನೋವಿನಾಟದಲ್ಲಿ
ಭಾವ ಬಿಕ್ಕಲು
ಕಣ್ಣನೀರ ಬುಗ್ಗೆಯಲ್ಲಿ
ಭಾವ ಚಿಮ್ಮಲು

೩

ಎದೆಯ ತುಂಬ ಸರಸದುಂಬಿ
ಪಕ್ಕ ಬಡಿಯಲು
ರಾಗದುಂಬಿದೆದೆಯು ತುಂಬಿ
ಹೊಕ್ಕು ಹರಿಯಲು

೪

ನಲ್ಲರೆದೆಯ ಲಲ್ಲೆವಾತು
ಮೂಡಿ ಬೆಳಗಲು
ಪ್ರೀತಿಯಿಂದ ಬಂದ ಮಾತು
ಪ್ರೇತವಾಗಲು

೫

ಹಸಿರು ಹುಲ್ಲ ಬಸಿರಿನಲ್ಲಿ
ಜೀವ ಸೂಸಲು
ಹಸಿರ ಬಳ್ಳಿ ಹೂವ ಚೆಲ್ಲಿ
ನಗೆಯ ಬೀರಲು

೬

ನಗೆಯ ನೊರೆಯು ಬಗೆಯ ತುಂಬಿ
ದಾಗ ತಿಂಗಳು
ಜಗದ ಜಡಕೆ ಜೀವ ತುಂಬಿ
ರಾಗ ದುಂಬಲು

೭

ಗಾನ ರಾಣಿ ಮಣಿಯುತಿದೆಯ
ವೀಣೆ ಮಿಡಿಯಲು
ರಾಗವೇಣಿ ಕುಣಿಯುತಿದೆಯ
ಜೇನು ಕಡೆಯಲು

೮

ಏನು ಗಾನವೇನು ತಾನ!
ಮೆಯ್ಯ ತುಂಬಲು
ಸಾನುರಾಗರಸದ ಮೌನ
ತುಂಬಿ ಹರಿಯಲು

೯

ಯಾವ ಭಾಷೆ ಬರೆದರೇನು
ಭಾವ ತುಂಬಲು
ಯಾವ ಛಂದ ಬಂಧವೇನು
ಭಾವ ಸೂಸಲು

೧೦

ಭಾವ ಮೆಯ್ಯ ತಾಳಿದಂತೆ
ಭಾಷೆ ಮೂಡಲು
ಜೀವ ಜನನವಾಗುವಂತೆ
ರೂಪ ತಾಳಲು

೧೧

ಭಾವಬಂಧವೆನ್ನ ಛಂದ
ಕಾವ್ಯದೇವಿಗೆ
ತೋಳ ಬಂದಿಯಾಗಲಂದ
ಕಾವ್ಯರಾಣಿಗೆ

## ನವಯುಗಾರಂಭ

೧

ಬಂದಿದೆ ಹೊಸ ದಿನ! ಬಂದಿದೆ ಹೊಸ ದಿನ!
ಬಂದಿದೆ ಹೊಸ ದಿನ! ಭಾರತ ನಾಡಿಗೆ
ಮೊಳಗುತ ಜಯಭೇರಿ
ನವಯುಗವನು ಸಾರಿ.
ನವಯುಗದೊಳು ನವಶಾಂತಿಯು ತಂದಿದೆ
ನವಕಾಂತಿಯು ಬೀಜಾ.
ಭಾರತದೀ ತೇಜಾ
ಆಧ್ಯಾತ್ಮಿಕ ದೋಜಾ
'ಶಾಂತಿ ಸಮರಕಿದು ಜಯಭೇರಿ
ವಿಶ್ವಶಾಂತಿಗಿದು ಹೊಸ ದಾರಿ'
ತಂದಿದೆ ಹೊಸ ದಿನ ಮೊಳಗುತ ಜಯಭೇರಿ;
ನವಯುಗವನು ಸಾರಿ

೨

ಹಿಂದಿನ ದಿನಗಳ ಕೊಳೆಯನು ತೊಳೆಯುತ
ತಿಳಿ ತಿಳಿಯಾಗಿದೆ ಹೊಸ ದಿನವು,
ಮಾನವ ಧರ್ಮಕೆ ಮಮತೆಯ ಕರೆಯನು
ಪ್ರೇಮದಿ ತಂದಿದೆ ಹೊಸ ದಿನವು,
ನೇಗಿಲಯೋಗಿಯು ಯೋಗಸಮಾಧಿಗೆ
ಜೀವನ ತಂದಿದೆ ಹೊಸ ದಿನವು,
ಹೆಣ್ಣು ಗಂಡುಗಳ ಸಮಾನದೃಷ್ಟಿಗೆ
ಸಮತೆಯ ತಂದಿದೆ ಹೊಸ ದಿನವು.
ಕಾರ್ಮಿಕರೆಂಬುವ ಕರ್ಮಜೀವಿಗಳ
ಸಂಜೀವನವೇ ಈ ದಿನವು,
ಸತ್ಯಪ್ರೀತಿಗಳ ನ್ಯಾಯ ನೀತಿಗಳ
ನೆಲೆಯನು ಕಂಡಿದೆ ಹೊಸ ದಿನವು.

ಹಿಂಸಾಯುಷ್ಟಿಗೆ ಶಾಂತಿಯ ತುಷ್ಟಿಯ
ತೊಡಿಸಿ ನಿಂತಿಹುದು ಹೊಸ ದಿನವು,
ಧರ್ಮವಂತರಿಗೆ ಧರ್ಮದ ಸತ್ರ
ಕರ್ಮಠ ಜನರಿಗೆ ಕರ್ಮದ ನೇತ್ರ
ಎಲ್ಲ ಧರ್ಮಗಳ
ಜಾತಿ ಪಂಥಗಳ
ವಿಶಾಲದೃಷ್ಟಿಗೆ ಹೊಸ ಮಂತ್ರ
ತಂದಿದೆ ಭಾರತ ಹೊಸ ತಂತ್ರ
ಯುಗಪುರುಷನದೇ ಈ ಯಂತ್ರ
ನುಡಿಯುತ ನಿಂತಿದೆ ಹೊಸ ದಿನವು,
ಯುಗದಾರಂಭದ ಈ ದಿನವು.
'ಭಾರತ ನವಯುಗದಾದೇಶ
ಭಾರತ ಶಾಂತಿಯ ಸಂದೇಶ'
ಜಗ ಕಾಣುತ ತಿಳಿಬೆಳಕೊಳು ಪಡೆಪಡೆವುದು ಶಾಂತಿ;
ಭಾರತದೀ ಕಾಂತಿ.
ಬೆಳಗುತ ಹೊಸ ದಿನ! ಬಂದಿದೆ ಈ ದಿನ
ಮೊಳಗುತ ಜಯಭೇರಿ
ನವಯುಗವನು ಸಾರಿ

೩

ಭಾರತನಾಡಿನ ಭಾಗ್ಯೋದಯವೇ
ತೆರೆದಿಹುದೀ ದಿನ ನೀವೇಳಿ!
ಅಲ್ಲದ ಸಲ್ಲದ ನಡತೆಯ ತೊರೆಯುತ
ಭಾರತೀಯರೇ ನೀವೇಳಿ!
ಅಂದದ ಚೆಂದದ ಗಂಧದ ಗುಡಿಯನು
ಮೆರೆಸುತಲೀ ದಿನ ನೀವೇಳಿ!
'ಅಖಂಡ ಭಾರತ ಚಿರಾಯುವಾಗಲಿ
ಸ್ವತಂತ್ರ ಭಾರತ ಚಿರಾಯುವಾಗಲಿ'

ಗರ್ಜನೆಯೊಂದಿಗೆ ನೀವೇಳಿ !
ಭಾರತೀಯರೇ ನೀವೇಳಿ !

೪

ನಾಡನು ಕಾಯುವ ನಾಡಿನ ಬಂಟರು
ನಾಡನು ಕಟ್ಟುವ ಪಣ ತೊಡಿರಿ
ನಾಡ ವೈರಿಗಳ ಮೂಲೋತ್ಪಾಟಕೆ
ನಾಡಿನ ಬಂಟರು ಪಣ ತೊಡಿರಿ
ನಮ್ಮಯ ನಾಡಿದು ನಮ್ಮದೆ ಆಗಿದೆ
ನಮ್ಮದಿಗಾಗಿಯೆ ಪಣ ತೊಡಿರಿ
ನಭೋಮಂಡಲದಿ ಫಟಫಟ ಹಾರುವ
ನಾಡ ಬಾವುಟಕೆ ತಲೆಬಾಗಿ
ತ್ಯಾಗಮೂರ್ತಿಗಳು ನೀವಾಗಿ
ಎಂಥ ತ್ಯಾಗಕೂ ಮುಂದಾಗಿ
ಕಂಕಣ ಕಟ್ಟುತ ಬನ್ನಿರಿ ಎನ್ನುವ
ಹೊಸ ದಿನ ಬಂದಿದೆ ಭಾರತ ನಾಡಿಗೆ
ಮೊಳಗುತ ಜಯಭೇರಿ
ಹೊಸ ದಿನವನು ಸಾರಿ

೫

" ಜಯಭಾರತ ! ಜಯಭಾರತ ! ಜಯಭಾರತವೆಂದು
ಜಯಗೀತವ ಹಾಡು
ಬಾನಂಚೊಳು ನೆರೆ ಮಿಂಚಿದೆ ಜಯಬಾವುಟವಿಂದು
ಶಿರಬಾಗುತ ನೋಡು.
ನವಭಾರತದರುಣೋದಯ-
ವಿಂದಾಗಿದೆ ಸೂರ್ಯೋದಯ
ಜಯಭಾರತ ! ಜಯಭಾರತ ! ಜಯಭಾರತವೆಂದು
ಭಾರತ ನಾಡೊಂದು "
ಎಂದೆನ್ನುವ ಯುಗದಾದಿಯೆ ಬಂತಿಹುದೋ ಇಂದು

ಹೊಸ ಯುಗವೇ ಮುಂದು
ಎಂದೆಂದು
ಎನ್ನುವ ಹೊಸ ದಿನ! ಬಂದಿದೆ ಈ ದಿನ
ಮೊಳಗುತ ಜಯಭೇರಿ
ನವಯುಗವನು ಸಾರಿ.

## ನಮಿಸೋಣ ಬಾ ಗೆಳತಿ !

೧

ನಮಿಸೋಣ ಬಾ ಗೆಳತಿ ! ಭಾರತದ ಬಾವುಟಕೆ
ಬಿಡುಗಡೆಯ ಹಾಡ ಹಾಡಿ
ನಾವೆಲ್ಲರೊಂದು ಗೂಡಿ
ಕರೆದು ಮಕ್ಕಳಿಗೆಲ್ಲ ಹೇಳೋಣ ಸವಿಸೊಲ್ಲ
ಬಾವುಟದ ಕೆಳಗೆ ಕೂಡಿ
ಸವಿಗತೆಯ ಸವಿಯ ಮಾಡಿ
ಬೀರೋಣ ಬಾ ಮಡದಿ ! ಬಿಡುಗಡೆಯ ನೆವಕಾಗಿ
ಸಕ್ಕರೆಯ ಸವಿಯುಮಾಡಿ
ಮಕ್ಕಳಿಗೆ ಮಮತೆಗೂಡಿ.

೨

ಹಂಗಿನರಮನೆಯಲ್ಲಿ ಶತಮಾನಗಳ ಬೇನೆ
ಸಹಿಸಿದಳು ನೋವಿನಿಂದೆ
ಕಹಿಬಾಳ ಗೋಳಿನಿಂದೆ
ಜೀವ ಸಾವುಗಳಲ್ಲಿ ಜನುಮ ಜೀಕುತಲಿರಲು
ತೂಗಿದಳು ನಿಲ್ಲದಂತೆ
ಹೋರಾಟದುಸಿರಿನಿಂದೆ
ಜೀವ ಝಲ್ಲೆನುವಂತೆ ಸಾವು ನರ್ತಿಸುತಿರಲು
ಬಿಡುಗಡೆಯ ಹಂಬಲಿಂದೆ
ಸಾಗಿದಳು ಭಾರತಾಂಬೆ.

೩

ಬಿಡುಗಡೆಯ ಬೀಜವನು ನಾಡಿನೆದೆಯೆದೆಯಲ್ಲಿ
ಬಿತ್ತಿದಳು ಹುಲುಸಿನಿಂದೆ
ಸೂದೆಯುಣಿಸಿ ಬಲಿಯಲೆಂದೆ.
ಅಂದು ಬಿತ್ತಿದ ಬೀಜ ಮೊಳಕೆಯಲಿ ಮೈದೋರಿ

ಮರವಾಗಿ ನಿಂತಿತೆಂದೆ
ಭಾರತರ ನೆತ್ತರಿಂದೆ
ಬಿಡುಗಡೆಯ ಬೆಲೆಗಾಗಿ ಭಾರತರ ಬಲಿದಾನ
ಬಿಡುಗಡೆಯ ಬಳ್ಳಿಯಲ್ಲಿ
ಹೂವಾಗಿ ಸಿಲ್ಲುವಲ್ಲಿ
ಬಂತು ಭಾರತಕಿಂದು ಹೊಸ ಯುಗದ ಕನಸಿಂದು
ನನಸಾಗಿ ಬಂದು ನಿಂತು
ಹೊಸ ಬೆಳಕು ಹೊಳೆಯುತಿಂತು
ಹೊಸಬಾನು ತಿಳಿಯಾಗಿ ಬೆಳಕು ಹೊಳೆ ಹೊಳೆಯಾಗಿ
ಬಾನೆಲ್ಲ ಬೆಳಕ ಕಂಡು
ಬೆಳಗುವದು ಬೆಳಕನುಂಡು
ಅಲ್ಲಿ ಬಾನೆಡೆಯಲ್ಲಿ ನೋಡದೋ ನೋಡಲ್ಲಿ !
ಬಿಡುಗಡೆಯ ಕದಿರಿನಲ್ಲಿ
ಬೆಳಗುವನು ನೇಸರಲ್ಲಿ.

೪

ತಳಿಗೆಯನು ತಾ ಮಡದಿ ! ಆರತಿಯ ಬೆಳಗೋಣ
ಸ್ವಾತಂತ್ರ್ಯ ಸೂರ್ಯಗಿಂದು
ಭಾರತದ ಬೆಳಕಿಗಿಂದು
ಜನುಮ ಜನುಮದ ಪುಣ್ಯ ತೇಲಿ ಬಂದಿಹುದಿಂದು
ಬಿಡುಗಡೆಯ ಕಾಣಲೆಂದು
ಸಡಗರವ ನೋಡಲೆಂದು.
ನಮಿಸೋಣ ಬಾ ಗೆಳತಿ ! ಬಾ ! ಮಕ್ಕಳೊಡಗೂಡಿ
ಬಾವುಟದ ಕೆಳಗೆ ಕೂಡಿ
ನಾವೆಲ್ಲರೊಂದುಗೂಡಿ

## ಅಗಸ್ಟ ೧೫

೧

ನಾಡ ಬಾವುಟವೆತ್ತಿ ಮೆರೆದು ನಿಂತಿಹ ದಿನವು
ಬಿಡುಗಡೆಯ ಸವಿತುತ್ತ ನೆನೆವ ದಿನವಿದುವು
ಬಾಳು ಭಾರತವೀರ! ಬಾಳು ನಿನ್ನದು ಮುಂದು
ಬಿಡುಗಡೆಯ ಬಂಟ ನೀನೆಂದ ದಿನವಿದುವು

೨

ಬಂಗಾರದಿನವೆಂದು ಸಿಂಗಾರವೆನಿತಾಯ್ತು
ಸಂಭ್ರಮದ ಮಾತಾಯ್ತು ಮುಂದೇನು ಗೆಳೆಯ
ಕಂಗೆಟ್ಟ ಜನಕಾವ ಬಿಡುಗಡೆಯ ಸೊಗವಾಯ್ತು
ಕಳೆಗೆಟ್ಟ ಮುಖಮುಚ್ಚಿ ಹೇಳುವಿಯ ಗೆಳೆಯ!

೩

ಮತ್ತೆ ಸಂಭ್ರಮವಂತೆ ಬಿಡುಗಡೆಯ ದಿನವಂತೆ
ಕಳ್ಳು ಕುಡಿದವರಂತೆ ಹೇಳದಿರು ಗೆಳೆಯ!
ಜಯಘೋಷದಿಂದೇನು ತುಂಬುವದೆ ಬರಿಯೊಡಲು
ಸಿಂಗಾರದಿಂದೇನು ಹಿಂಗುವದೆ ಹಸಿವೆ?

೪

ಸ್ವಾತಂತ್ರ್ಯವೆಂದರದು ಸಂಭ್ರಮದ ಸಾವಲ್ಲ
ಬದುಕಿ ಬಾಳುವ ಸ್ಥಿತಿಯು ತಿಳಿದು ನೋಡು!
ಹತ್ತು ಮಾತಿನಕಿಂತ ಒಂದು ಕೃತಿಯೇ ಸಾಕು
ಸ್ವಾತಂತ್ರ್ಯದರ್ಥವನು ನೀನರಿದು ಹೇಳು

೫

ಎಂದು ಬರುವದೊ ಗೆಳೆಯ! ಸ್ವಾತಂತ್ರ್ಯದಾ ದಿನವು
ನಾಡು ನೆಮ್ಮದಿಯಲ್ಲಿ ನಿಂತ ದಿನವು
ಅಂದು ಬಾವುಟವೆತ್ತು ತಳಿಗೆಯಾರತಿವೆತ್ತು
ದೇವಿ ಭಾರತಿಗಂದು ಪೂಜೆಮಾಡು

# ಸ್ವಾತಂತ್ರ್ಯ ವೀರನಿಗೆ

ಆಶಾ ನಿರಾಶೆಗಳ ಘೋರ ಘರ್ಷಣೆಯಲ್ಲಿ
ನಾಡಿನಾಶಾಪೂರ್ಣ ಸೃಷ್ಟಿಯೆಲ್ಲಿ ?
ನಾಡ ಬಿಡುಗಡೆಗಾಗಿ ಹೋರಾಟವೆಸಗಿರುವ
ನಾಡಯೋಧರಿಗಿಂದು ಹೊಸ ದೃಷ್ಟಿಯೆಲ್ಲಿ ?

ಪ್ರಾಣವನೆ ಪಣಕಿಟ್ಟು ನಾಡನುದ್ಧರಿಸಿರುವ
ನಾಡ ಬಂಟನ ನಾಡು ಕಾಡಾಯಿತೇಕೆ ?
ತ್ಯಾಗ ಬಲಿದಾನಗಳ ಯೋಗಸಿದ್ಧಿಯ ಪಡೆದ
ಸಿದ್ಧಪುರುಷನ ನಾಡು ಕಾಡಾಯಿತೇಕೆ ?

ಸ್ವಾತಂತ್ರ್ಯವೆಂದರದು ಸ್ವಚ್ಛಂದವೇ ಗೆಳೆಯ !
ನಿನ್ನಂತರಂಗವನು ಬೆದಕಿ ನೋಡು
ಸ್ವಾರ್ಥಮೂಲವೆ ನಿನ್ನ ಬಿಡುಗಡೆಯ ಬಲಿದಾನ
ದೇಶವತ್ಸಲನಾಗಿ ತಿಳಿದು ನೋಡು.

# ವಸಂತಾಗಮ

೧

ಬಾನ ಬಯಲೊಳೇಸಿದುಲುಹು
ಗಾಳಿ ರೆಕ್ಕೆ ಬಡಿವುದೊ ?
ತಾನ ತಾನದಲ್ಲಿ ಚೆಲುವು
ತಾಳವಿಕ್ಕಿ ಕುಣಿವುದೊ ?

೨

ನೆಲದ ಹೆಣ್ಣು ಕುಣಿವಳೇಕೆ ?
ಭಾವ ಮೆಯ್ಯ ತುಂಬಿತೊ !
ಜಲದ ಹೆಣ್ಣು ಮಣಿವಳೇಕೆ ?
ಭಾವ ಭಂಗಿಯಾತಕೊ ?

೩

ನೆಲದ ಹೆಣ್ಣು ಕುಣಿವಳೆಂದು
ಜಲದ ರಾಣಿ ಮಣಿದಳೊ ?
ಜಲದ ಜಾಣೆ ಮಣಿವಳೆಂದು
ಒಲಿದ ರಾಣಿ ನಲಿದಳೊ ?

೪

“ ಕುಣಿವುದೇಕೆ ? ಮಣಿವುದೇಕೆ ?
ಹೊನ್ನತಳಿಗೆ ಏತಕೆ ?
ದಣಿದ ಚೆಲುವು ಕೆನ್ನೆಗೇಕೆ
ಚೆನ್ನೆ ! ಯಾರ ಸೇವೆಗೆ ? ”

೫

ಹೊನ್ನ ತಳಿಗೆಯೆತ್ತಿ ಚೆನ್ನೆ
ವಸಂತ ಬಂದನೆಂದಳು
ಕಣ್ಣ ಕೊನೆಯನೆತ್ತಿ ಕನ್ನೆ
ವಸಂತಗಾರತೆಂದಳು

## ರತಿ

೧

ಬಿರಿದಲರುಗಳೊಗೆವ
ಕಂಪಿಡುಗಿಹುದು ;
ತರುಲತೆಗಳ ಮೊಗಕೆ
ಪೆಂಪಡರಿಹುದು.

೨

ತಂಗದಿರನ ಹೊದಿಕೆ
ನೆಲದಂಗನೆಗೆ
ಕಂಗೊಳಿಸಿದಳಿಳೆಯು
ಬೆಳುದಿಂಗಳಿಗೆ

೩

ಮುದವೆಲ್ಲೆಡೆ ತೀವಿ
ಮನಮೋಹಿಪುದು ;
ಎದೆಯೊಲವಿಗೆ ತೂಗಿ
ತನು ಕುಣಿಯುವದು

೪

ಪೊಸ ಜವ್ವನವಾಂತು
ಬರುತಿ-ಹಳಾರು ?
ತುಸು ಲಜ್ಜೆಯ ತೋರಿ
ಅರೆನೋಟದಲಿ

೫

ಮುದವಿಳಿಯಿತೊ ಜಗಕೆ
ಬೆಡಗಿಳಿದಿಹುದೊ ?
ಸೊದೆ ಸುರಿವಳು ನೋಡು
ಜಡ ಜಂತುವಿಗೆ !

೬

ಆರಿವಳೀ ಚೆಲುವೆ ?
ವನದೇವತೆಯೆ ?
ತಾರುಣ್ಯದ ಕೆನೆಯೆ ?
ರಮಣಿಯಿದಾರು ?

೭

ಎಂದುಸುರಿದೆನೊಮ್ಮೆ
ಬೆಳುದಿಂಗಳಲಿ
ಬಂದೊರಗಿದ ಸಿರಿಗೆ
ಕಳೆದಿಂಗಳಲಿ

೮

" ನೆಲವೆಣ್ಣಿನ ಕೆಳದಿ
'ರತಿ' ದೇವಿಯಳು
ಇಳೆಗಿಳಿದಿಹ ಚೆಲುವು
ಸತಿಸಂಭ್ರಮೆಯು."

೯

ಎಂದುಲಿಯಿತು ಹಕ್ಕಿ
ಪೊದೆ ನಾಡಿನಲಿ ;
ಬಂದೊಲಿದಳು ರಮಣಿ
ಎದೆ ನಾಡಿನಲಿ.

## ಮೆಚ್ಚಿದಾಕೆ

೧

ಅಚ್ಚುಮೆಚ್ಚಿನ ಹೆಣ್ಣ
ಮೆಚ್ಚಿ ನಿಂತೆಯ ನನ್ನ !
ಹುಚ್ಚು ಬಾಳಿನ ಸವಿಯ ಕನಸಾಗಿ ;
ಜೀವನದ ಹೊಸ ಹಾದಿ ನೀನಾಗಿ.
   ಯಾವ ಮಾಯೆಯೊ ಕಾಣೆ
   ಭಾವದೇವಿಯ ವೀಣೆ
   ಮಿಡಿಯೆಂದು ನೀ ಬಂದೆ ಬಳುಕಾಡುತ ;
   ರತಿ ರೂಪ ಬಂದಂತೆ ಮೈದಾಳುತ.

೨

ನಿನ್ನ ರೂಪದ ಸಿರಿಗೆ
ಚೆನ್ನ ನಡೆನುಡಿ ಸಿನಗೆ
ಮೈ ಬಣ್ಣ ಹಿರಿದೇನ ? ನಡೆಯಂದ ;
ಹೊರಕಾಂತಿ ಹೊಳಪೇನ ? ನುಡಿ ಚಂದ.
   ನಿನ್ನ ಬೆಡಗಿನ ರೂಪ
   ವೆನ್ನ ಮೋಹಿಸುವಾಗ
ಕುಸುರಾಗಿ ಹೊಸ ಭಾವ ಚಿಗುರೊಡೆಯಿತು ;
ಹೊಸದೊಂದು ಮನದಾಸೆ ಮೈಗೂಡಿತು.

೩

ನನ್ನ ಜೀವನದಲ್ಲಿ
ನಿನ್ನ ಬಾಳಿನ ಬಳ್ಳಿ
ಚಿಗಿತು ಹೆಮ್ಮರವಾಗಿ ಹೊದುಂಬಲಿ ;
ಹೂವಾಗಿ ಕಾಯಾಗಿ ಫಲದುಂಬಲಿ.

ಎಂಬೊಂದು ಮನದಾಸೆ
ನಿಂತಂತೆ ಹಿರಿಯಾಸೆ
ನಿನ್ನೆದೆಯ ಬಿರಿದಲರು ಹೊರಸೂಸಿತು ;
ನನ್ನೆದೆಯ ಹೂವಾಗಿ ಗಮಗಳಿಸಿತು.

೪

ಮೆಚ್ಚಿ ಬಂದಿಹ ಹೆಣ್ಣ !
ಹುಚ್ಚು ಹಿಡಿಸುವ ಕಣ್ಣ
ಕಡೆನೋಟ ತಡವರಿಸಿ ತಡದೇನ ;
ಬಿಡದಂತೆ ನಾನೂನು ನೋಡೇನ.
ಹುಚ್ಚು ಹುಡುಗೆಯೆ ನೀನು
ಮತ್ತ ನೋಡುವಿಯೇನು
ನಿಮಿಷಕ್ಕೆ ಹೊಸ ರೂಪ ನಾನೇನ ?
ಹೊಸಬಾಳ ನೆಳೆವಾಕೆ ನೀನೇನ.

೫

ಮಂದಹಾಸದ ಮೋರೆ
ಯಿಂದ ಬಣ್ಣಿಸಲಾರೆ
ರಸಗಬ್ಬ ಮೈದಾಳಿ ನಿಂತಂತೆ ;
ಹೊಸ ಭಾವ ಮೈದೋರಿ ಬಂದಂತೆ.
ನೀನಿರುವೆ ಬಾ ! ಜಾಣಿ !
ಕಬ್ಬಿಗನ ಕುಲವಾಣಿ !
ಬಾ ಬಾರೆ ರಸವಂತಿ ನನ್ನಾಕೆ !
ಕಬ್ಬಿಗನ ಮನಮೆಚ್ಚಿ ನಿಂತಾಕೆ.

## ಮುಡಿ ಹೂ

೧

ಕೆಳದಿಯ ಮುಡಿಯಲಿ ಪರಿಮಳ ಬೀರುವ
ಪೂಸರವಾಗುವುದಾನಂದ
ಚೆಲುವೆಯ ಸಿರಿಮುಡಿ ಸೊಂಪೆನು ಸವಿಯುವ
ರಸಾತ್ಮನಾಗುವುದೆನಗಂದ.

೨

ಮುಡಿ ಹೂ ! ಮುಡಿ ಹೂ ! ಮುಡಿ ಹೂವಾಗುವೆ
ಮಡದಿಗೆ ಪ್ರೇಮವ ಬೀರುತಲಿ :
ಮಲ್ಲಿಗೆಯಾಗುವೆ, ಗುಲಾಬಿಯಾಗುವೆ,
ನನ್ನೆದೆ ಕಂಪನು ಹರವುತಲಿ.

೩

ಮುಡಿಯಲಿ ಬಂಧನವಾಗುತಲಿನಿಯಳ
ಅಗಲದಲಿರುತಿಹೆನೊಲವಿನಲಿ
ಬೆಡಗಿನ ಬಾಲೆಯು ಕಡು ಬಿನ್ನಾಣದ
ಕಾಟವ ತಪ್ಪಿಸಿ ಬಿಂಕದಲಿ.

೪

ವೇಣಿಗೆ ತೊಡಕಿಸಿ ಮೆರೆಯುವ ಮೊದಲೊಳು
ಮೂಸುವಳಿನಿಯಳು ಪೂಸರವ
ಜಾಣೆಯು ಸೋತಳು ದಂಡೆಯೆ ನಾನಿರೆ
ಸವಿಯುವೆ ರಸವನು ಕೆಳದುಟಿಯ.

೫

ಒನಪನು ತೋರುತ ಸಿರಿಮುಡಿಗೇರಿಸಿ
ನಲ್ಲಳು ರಮಿಸುವುದಾನಂದ
ಬಳಕುವ ಭರದಲಿ ಕರದಿಂ ತಟ್ಟಲು
ಕರಾಗ್ರಚುಂಬನವಾನಂದ.

೬

ಮುಡಿ ಹೂ ! ಮುಡಿ ಹೂ ! ಮುಡಿ ಹೂವಾಗುವೆ
ಮಡದಿಗೆ ಪ್ರೇಮವ ಬೀರುತಲಿ
ಮಲ್ಲಿಗೆಯಾಗುತ ಗುಲಾಬಿಯಾಗುವೆ
ನನ್ನೆದೆ ಕಂಪನು ಹರವುತಲಿ.

## —ಗೆ

೧

ಜೀವದ ಸವಿಯು ಜೀವನಕಿರುವುದು
 ಬದುಕಿನ ಬೇಸರ ನೋಡು !
ಸಾವಿನ ಪರಿಯು ಸಾವಿಗಿರುವುದು.
 ಜೀವನದೊರತೆಯ ತೋಡು !

೨

ಭಾವವನರಳಿಸಿ ಭಾವದ ತುಂಬಿ
 ಭಾವಭಂಗಿಯಲಿ ಮೈದುಂಬಿ
ಭಾವಸಮಾಧಿಯ ನೋವಿನಾಟದಲಿ
 ಕುಣಿ ಕುಣಿ ಮೈ–ಮನ–ಬಗೆದುಂಬಿ.

೩

ಭಾವ ಜೀಕಿದಾಗ ತನುವು ಕುಣಿಯುತದ
 ದುಂದು ತುಂಬುತದ ಮಯ್ಯಾಗ
ನೋವೆ ನೋಯುತದ ಸಾವೆ ಸಾಯುತದ
 ಜೀವ ತುಳುಕುತದ ನರದಾಗ.

೪

ಜೀವದ ಗೊಂಬಿ ! ಜೀವ ತುಂಬುತದ
 ತಾಳ ಹಾಕತದ ನುಡಿಯಾಗ
ಜೀವ ತೇಲುತದ, ಭಾವ ಬರೆಯುತದ
 ಮೇಳಗೂಡುತದ ಮನದಾಗ.

೫

ಮನದ ಮೇಳದಾಗ ತನುವು ಕುಣಿದರ
 ಬಣ್ಣ ಮಿನುಗುತದ ಮುಖದಾಗ.
ಮನದ ಹೆಣ್ಣು ನೀ ! ಕುಣಿಯುತ ಬಂದರ
 ಕವನವಾಗುತದ ಎದೆಯಾಗ.

ಳ

ಹೊರ ಜಗದ ಪರಿವೇನ ? ಇರುವಿಕೆಯ ಅರಿವೇನ ?
ರತಿದೇವಿ ಮನಸೋತು ಬಂದಾಗ
ಪತಿಯಾಗಿ ಕಡಲಾಗ ನಿಂತಾಗ ;
ಕಡಲಲ್ಲಿ ಮುಳುಗೋಣ
ದಡದಾಸೆ ನಮಗೇನ.
ಮಡಿದಾಗ ನೋಡೂಣು ಕಡಲಾಳಾ ;
ತಡೆಯಾಕ ಕುಣಿಯೋಣು ಹಿಡಿ ತಾಳಾ.

೫

ಸಾವೆಮಗ ಕಡೆಯೆಂದು ಇಂದೇಕೆ ಮಡಿಯೋಣ
ಬಾಳೆಳೆದು ಸವಿಜೇನು ಸುರಿಯೋಣ;
ಬಾಳ್ಮಗಿಯೆ ನಲಿಯುತ್ತ ನಡೆಯೋಣ.
ಬಾಳೆರದು ಕೊಟ್ಟಾವ
ಬಾಳ್ಮಗಿಸಿ ಮೆಟ್ಟಾವ
ತಾ ಬಲ್ಲ ತನ್ನಾಟ ನಮಗೇನ ?
ಜೀವನವು ಚಿನ್ನಾಟ ಕುಣಿಯೋಣ

## ಸಗ್ಗವೆಣ್ಣು

೧

ಜಾರುತಿರುವ ಮೇಲುದನ್ನು
ಮತ್ತೆ ಓರೆಮಾಡುತ
ಬೀರಿ ಮುವೆದಹಾಸವನ್ನು
ಚಿತ್ತ ಸೂರೆಗೊಳ್ಳುತ.

೨

ಸಗ್ಗವೆಣ್ಣು ಬಂದಳಂದು
ಸೋಗೆಗಣ್ಣು ಕುಣಿಸುತ
ಶಬ್ದಬ್ರಹ್ಮ ಸೋಲುವಂದು
ಬಗೆಯ ಭಾವ ಮರೆಸುತ.

೩

ಏನು ಬಳುಕಿ ನಡೆವಳಿವಳು!
ನೇವುರುಲಿಯ ಕೇಳುತ.
ಯಾರ ಮನದ ಮಾರಿಯಿವಳು
ಮಾರ ಮಸೆದ ಆಯುಧ.

೪

ಯಾವ ಮುನಿಯ ಘೋರ ತಪಕೆ
ಕಿಡಿಯನಿಟ್ಟು ಬರುವಳೊ!
ಯಾರ ಬ್ರಹ್ಮಚರ್ಯದೆಸೆಗೆ
ಶಾಂತಿ ಮಂತ್ರ ಪಠಿಪಳೊ!

೫

ಇವಳ ಕಂಡು ಸೋಲದಿರುವ
ಗಂಡು ಜಗದಲಿರುವನೆ?
ಇವಳ ಮನವ ಮುರಿಯಲಿದೆಯ
ಮಾಳ್ಪ ಮನುಜನಿರುವನೆ?

೬

ರೂಪರಾಶಿ ಮೆಲ್ಲನಡಿಯ
ನಿಡುತ ಬಂದಳೂರ್ವಶಿ
ಭೂಪರೊಡೆಯ, ಪಾರ್ಥನಡಿಯ
ಸೇವೆ ಮನದಿ ಧ್ಯಾನಿಸಿ.

೭

ಪಾಶುಪತವ ಗೆಲಿದ ಪಾರ್ಥ
ನೆನಿತು ಚೆಲುವನಿರುವನೊ!
ಬೀಸಲಾನು ಮೋಹಪಾಶ
ಕೆನಿತು ಮನದ ತಳೆವನೊ!

೮

ಹಿಗ್ಗಿಯೊಮ್ಮೆ ಕುಗ್ಗಿಯೊಮ್ಮೆ
ಒಮ್ಮೆ ಲಜ್ಜೆಯಾನುತ
ಸಗ್ಗವೆಣ್ಣು ಬಂದಳೊಮ್ಮೆ
ಪಾಂಡುಪುತ್ರನರಸುತ.

೯

ಚೆಲುವುತನದ ಸಿರಿಯಸಾರ
ವಿಲ್ಲಿ ಹೆಪ್ಪುಗಟ್ಟಿತೊ!
ದೆಳೆದ ಹೆಣ್ಣಿನೊಲವು, ಮೀರ
ಲಿಲ್ಲಿ ಮೇರೆದಪ್ಪಿತೊ!

೧೦

ಎನ್ನುವಂತೆ ಬೆಡಗಿನಬಲೆ
ತನ್ನ ಮುಂದೆ ನಿಂತಿರೆ
ಸನ್ನುತಾಂಗ ಮೌನವಾಂತು
ಬೀಗಿ ಸುಮ್ಮನಿರುತಿರೆ.

೧೧

ಮಾರಸಿರಿಯ ಹೊತ್ತ ಹೆಣ್ಣು
ಮದನನಂಬು ತಡೆಯದೆ
ಬೀರಿ ಸೊಬಗನಿರಿಸಿ ಕಣ್ಣು
ವದನದಲ್ಲಿ ಕೂಡಿಸೆ.

೧೨

ತಿರುಹಿ ಮೊಗವನಾ ಕುಮಾರ
ದಿಟ್ಟದೂರ ಚೆಲ್ಲಲು
ಸರಸಿಜಾಕ್ಷಿಗದುವೆ ಮಾರ
ನಿಟ್ಟ ಬಾಣವಾಗಲು.

೧೩

" ನಿನ್ನ ಬಯಸಿ ಬಂದೆನಿದುವೆ
ನಿನ್ನ ಸಂಗ ಸವಿಯಲು
ನನ್ನ ಗಳಿಸಿಕೊಂಡರೊಡನೆ
ಸಗ್ಗ ಸುಖವನೀಯಲು.

೧೪

ಮಾರ ನೆಟ್ಟ ಘೋರ ಸರಳು
ತಾಕಿ ಗಾಯವಾಗಲು
ನನ್ನ ಚೆಲುವು, ನನ್ನ ಒಲವು
ನಿನಗೆ ಇಟ್ಟ ಮೀಸಲು.

೧೫

ಸಗ್ಗವೆಣ್ಣು ಸೋತು ಬರಲು
ಹಿಗ್ಗಿ ಮುಂದೆ ಕರೆಯದೆ
ವೆಗ್ಗಳಾಗಿ ಗಳುಪಿ ನನ್ನ
ಮನಕೆ ಮುದವ ನೀಡದೆ

೧೬

ಮೌನವಾಂತ ಬಗೆಯಿದೇನು
ಹೇಳೊ ರಾಯ " ವೆನ್ನಲು
ಕುಂತಿಯಣುಗ ಚಿಂತೆಯಿಂದ
ಕಣ್ಣನೆತ್ತಿ ಚೆಲ್ಲಲು.

೧೭

ಗಾಸಿಯಾದಳಬಲೆ, ಮದನ
ತಾಪದಿಂದ ಬೆಂದಳು
ಸೂಸಿ ಕಣ್ಣ ಕುಣಿಸಿಯುವನ
ರೂಪರಾಶಿ ಕುಡಿದಳು

೧೮

ನೋಡು ನೋಡುತಿರಲು ತಾನೆ
ಸೆರಗು ಜಾರಿ ಬೀಳಲು
ನೋಡಿ ನೋಡದಂತೆ, ಲಲನೆ
ಕಾಮಜಾಲ ಬೀಸಲು.

೧೯

ಒಂದು ಹೆಜ್ಜೆ ಮುಂದೆ ಬಂದು
ಪಾರ್ಥ ಬಳಿಯ ಸಾರಲು
ಮಾರನಂಬಿನೇಟಿನಿಂದ'
ಕೆನ್ನೆ ಬಣ್ಣ ತಿರುಗಲು.

೨೦

ಬೆವರನೊರಸಿ ದೈನ್ಯದಿಂದ
ಕರವ ಮುಗಿದು ನಿಲ್ಲಲು
ಬವರ ಬಂಟನೊಗರಿನಿಂದ
ತರುಣಿಗಿಂತು ನುಡಿಯಲು.

೨೧

“ ದೇವ ಜಗದ ಗಣಿಕೆಯಮ್ಮ
ನನ್ನನೇಕೆ ಬಯಸಿದೆ ?
ಭಾವವೇನು ? ಕೂಡೆನಮ್ಮ
ಬಯಲುಭ್ರಾಂತಿ ಹೊಂದಿದೆ.

೨೨

ನಿನ್ನ ಬಯಲು ಡೊಂಬದಾಟ
ವೆನ್ನ ಮುಂದೆ ಸಾಗದು.
ನಿನ್ನನಿರಿದ ಮಾರನಾಟ
ವೆನ್ನ ಮುಂದೆ ನಿಲ್ಲದು.

೨೩

ಹಿಂದಕ್ಕೊಮ್ಮೆ ಹಿರಿಯನಾದ
ಪುರೂರವನ ಹೊಂದಿದೆ.
ಇಂದು ಅವನ ವಂಶದಲ್ಲಿ
ಹುಟ್ಟಿದವನನೊಲಿದಿಹೆ.

೨೪

ನೀತಿವೆತ್ತ ನಾಡು ದೇವ
ಲೋಕವೆಂದು ಕೇಳಿದೆ !
ರೀತಿಗೆಟ್ಟ ಬಾಳಿದೇನು ?
ಭಂಡತನದ ಬಾಳುವೆ.

೨೫

ಸಾಗು ತಾಯಿ ! ದೂರ ಹೋಗು !
ಹಣಿಯಲಾರೆ ಮಾರಗೆ
ಬೇಗನೇಳು ನಿನ್ನ ಕಾಮ
ನೀರ ಹೋಮವಾಗಿದೆ.”

೨೬

ನುಡಿದನಿಂತು ಭಾವದಳೆದು
ನಿಂತ ಬೆಡಗಿನಬಲೆಗೆ
ಸಡಗರದಲಿ ಬಯಸಿ ಬಂದ
ಮದನ ಸೂತ್ರಗೊಂಬೆಗೆ.

೨೭

ಕಾಮನಂಬಿನಿರಿತದಾಸೆ
ಬಾಡಿ ಬಕ್ಕಲಾಗಲು
ರೋಮ ರೋಮದಲ್ಲಿ ರೋಷ
ಮೂಡಿ ಬಾಲೆ ನಡುಗಲು.

೨೮

ಕಿಡಿಗಳುದುರೆ ಕಂಗಳಿಂದ
ಲೆದೆಯು ನಾಡು ಕಾಯಿತು.
ಸುಡುವಳೇನೊ ಶ್ವಾಸದಿಂದ
ಲೆಂಬ ಬಗೆಯು ತೋರಿತು.

೨೯

ಖಾತಿವೆತ್ತ ಸಗ್ಗವೆಣ್ಣು
ಕ್ರೂರ ದಿಟ್ಟಿ ಬೀರುತ
ಪಾರ್ಥನೆದೆಯನಳುಕಿಸುತ್ತ
ಕಾರಿ ಧೂಮ, ಚೀರುತ

೩೦

“ ಎಲವೊ ! ನಿನ್ನ ಗಂಡುವೇಷ
ನಂಬಿ ಮೋಸವೋದೆನು.
ತಿಳಿಯಲಿಲ್ಲ, ಹೆಣ್ಣು ಮೋಹ
ದುಂಬಲಿತ್ತ ಬಂದೆನು.

೩೧

ಸಗ್ಗವೆಣ್ಣಿಗಣಕವಾಡಿ
ಸಿಡಿದೆ, ಖೂಳ! ತಿಳಿಯದೆ
ಸಗ್ಗವೆಣ್ಣು ಸುಲಭಳೆಂದು
ಬಗೆದೆ ಭಾವ ತಿಳಿಯದೆ.

೩೨

ನಿನ್ನ ಗಂಡುತನದ ಗರುವ
ವೆನ್ನ ಮುಂದೆ ನೀಡಿದೆ
ಬನ್ನ ಬಡಿಸಿ, ರೋಷದುಂಬಿ
ಸೆನ್ನ ಮನವ ಕೆಡಿಸಿದೆ.

೩೩

ಭಂಡಳೆಂದು ಶಾಪಶಕ್ತಿ
ತಳೆದ ಹೆಣ್ಣ ಕೆಣಕಿದೆ
ಷಂಢನಾಗು ಹೋಗು ವರುಷ
ಹೆಣ್ಣ ಕೈಯ ತೋರಿದೆ."

೩೪

ಹೀಗೆ ಮುರಿದ ಮನದ ಹೆಣ್ಣು
ಶಾಪವಿಕ್ಕಿಯಡಗಲು
ಬೇಗೆಯಾಯ್ತು ಪಾರ್ಥನೆದೆಗೆ
ಕಣ್ಣು ಕತ್ತಲಾಗಲು.

## ಮೂಸಲಾರದ ಹೂ

ಮೂಸಲಾರದ ಹೂವನಾಸಿಸಿದರೇನಂತೆ
ಮಿಾಸಲಾಗಿಹುದೆಂದು ಮೂಸಬಹುದೆ?
ಹರವಿದಾ ಮಲ್ಲಿಗೆಯ ಪುಷ್ಪವಾಟಿಕೆಯಲ್ಲಿ
ಹರಯದಾ ಹಾಸುಗೆಯ ಹಾಸಬಹುದೆ ?

## ಸವಿಜೇನು

೧

ನಿನ್ನೆದೆಯ ಒಲವೆಲ್ಲ ಮೈ ಬಣ್ಣ ಕಿಳಿದಂತೆ
ನನ್ನ ಮನಸಿನ ಹುಚ್ಚು ಹಿರಿದಾಯಿತು ;
ನಿನ್ನ ರೂಪದ ಸಿರಿಗೆ ಶರಣಾಯಿತು.
ಬಿರಿದಲರ ಕಂಡಾಗ
ತಂಗದಿರ ಬಂದಾಗ
ಮನ ಹಿಗ್ಗಿ ತುಳುಕುವುದು ಯಾಕೇನ ?
ತನು ನೆಚ್ಚಿ ಕುಣಿಯುವದು ತಾನೇನ.

೨

ನಿನ್ನಂತರಂಗದಾ ದಿವ್ಯ ಸನ್ನಿಧಿಯಿಂದ
ನಿನ್ನೊಲುಮೆ ಕನಸೆಂದು ಬಳಲೇನ;
ನಾನೆನ್ನ ಮನದಾಗ ಮಿಡುಕೇನ
ನೀರಡಿಸಿ ನಿಂತಾಗ
ಝುರಿಯುದಿಸಿ ಬಂಧಾಂಗ
ನಿನ್ನೊಲವ ತೆರೆದೊಮ್ಮೆ ನೀ ಬಂದೆಯೆ
ನನ್ನಿರಿವಿಗಾನಂದ ನೀ ತಂದೆಯೆ.

೩

ತನ್ನೊಡಲಿನೆಳೆಯಿಂದ ಮನೆಯೊಂದ ನಿಲ್ಲಿಸುವ
ಹಿರಿಜಾಡ ನೂಲೇನ ನಿನ್ನೊಲುಮೆಯು
ಹರವಾದ ಬಲೆಯೇನ ನಿನ್ನೊಲುಮೆಯು,
ನೀನೆನ್ನ ಬಳಿಯಾಗ
ಹಗಲೆಲ್ಲ ಸುಳಿವಾಗ
ನಿನ್ನ ಹೆಜ್ಜೆಯ ದನಿಯ ಹಿಡಿದೇನ ;
ನನ್ನನ್ನೆ ನಾ ಮರೆತು ಮುಳುಗೇನು

೪

ಹೊರ ಜಗದ ಪರಿವೇನ ? ಇರುವಿಕೆಯ ಅರಿವೇನ ?
ರತಿದೇವಿ ಮನಸೋತು ಬಂದಾಗ
ಸತಿಯಾಗಿ ಕಡಲಾಗ ನಿಂತಾಗ ;
ಕಡಲಲ್ಲಿ ಮುಳುಗೋಣ
ದಡದಾಸೆ ನಮಗೇನ.
ಮಡಿದಾಗ ನೋಡೂಣು ಕಡಲಾಳಾ ;
ತಡೆಯಾಕ ಕುಣಿಯೋಣು ಹಿಡಿ ತಾಳಾ.

೫

ಸಾವೆಮಗ ಕಡೆಯೆಂದು ಇಂದೇಕೆ ಮಡಿಯೋಣ
ಬಾಳೆಳೆದು ಸವಿಜೇನು ಸುರಿಯೋಣ;
ಬಾಳ್ಮಗಿಯೆ ನಲಿಯುತ್ತ ನಡೆಯೋಣ.
ಬಾಳೆರದು ಕೊಟ್ಟಾವ
ಬಾಳ್ಮಗಿಸಿ ಮೆಟ್ಟಾವ
ತಾ ಬಲ್ಲ ತನ್ನಾಟ ನಮಗೇನ ?
ಜೀವನವು ಚಿನ್ನಾಟ ಕುಣಿಯೋಣ

# ನಲ್ಲೆ ! ಮತ್ತೆ ಬಾರದೇನೆ ?

೧

ಅಂದಿನ ಆನಂದ । ಮತ್ತೆ ಬಾರದೇನೆ ?
ಕನ್ನೆ ಬೆಡಗ ಬೆರಸಿ
ಕೆನ್ನೆ ಹೂವ ಸರಿಸಿ
ಕಣ್ಣ ಕೊನೆಯ ಕುಣಿಸಿ
ನೋಡಿದ ಆನಂದ । ನೋಟ ನುಂಗಿತೇನೆ ?
ನಲ್ಲೆ ! ಮತ್ತೆ ಬಾರದೇನೆ ?

೨

ಅಂದಿನ ಆನಂದ । ಅಂದೆ ನುಂಗಿತೇನೆ ?
ಹೊಸಹರೆ ಸುಳಿದಾಗ
ಹುಸಿಹಗೆ ಸೆಳೆದಾಗ
ಹಸೆಯಲಿ ಮಣಿದಾಗ
ಮಿಂಚಿದ ಆನಂದ । ಮಿಂಚಿಹೋಯಿತೇನೆ ?
ನಲ್ಲೆ ! ಮತ್ತೆ ಬಾರದೇನೆ ?

೩

ಹಿಂದಿನ ಆನಂದ । ಹಿಂದೆ ಹೊರಟಿತೇನೆ ?
ಒಲುಮೆಗೆ ಜೋಡಾಗಿ
ನಲುಮೆಯು ಶರಣಾಗಿ
ಬಾಳಿಗೆ ಸಿರ ಬಾಗಿ
ಬಾಳಿದ ಆನಂದ । ಬಾಳದಾಯಿತೇನೆ ?
ನಲ್ಲೆ ! ಮತ್ತೆ ಬಾರದೇನೆ ?

೪

ಸೃಷ್ಟಿಯ ಆನಂದ । ಎಂದಿಗು ಹೊಸತೇನೆ!
ಹೊಸ ಜಲಕಿದಿರಾಗಿ
ಹೊಸ ನೆಲಕುಸುರಾಗಿ
ಮೂಸದ ಪಯಿರಾಗಿ
ಸೂಸುವ ಆನಂದ! ನಮಗ ಬಾರದೇನೆ?
ನಲ್ಲೆ! ಮರಳಿ ತೋರದೇನೆ?

## ನಿನಗೆ ನಾನೆಯೆ !

೧

ನಗುತ ನಲಿಯುತ ನಲಿಯುತೊಲೆಯುತ
   ಬಾಗು ರಮಣಿ ಬಾಳಿಗೆ
   ತೂಗು ತೆದೆಯನೊಲುಮೆಗೆ
ಬಾಳ ಮೋಡಕೆನ್ನಗಾಢ ಪ್ರೇಮ ಗೆಳತಿಯೆ ;
ಗಾಳಿ ನೋಡ ಬಾಳ ದೂಡ ನಿನಗೆ ನಾನೆಯೆ.

೨

ಹರಯ ಜೀವನಾ ಪರಮ ಪಾವನಾ
   ನೋಡು ಪ್ರಣಯ ಜೀವನಾ
   ಕಾಡು ಬಿರಿದ ಭಾವನಾ
ಹರಯ ಹಾಸಿನಲ್ಲಿ ಸೂಸಿ ನಗೆಯ ನೊಂದೆಯೆ ;
ತೆರೆದ ಬಾಳನರಳಿಸೇಳ ! ನಿನಗೆ ನಾನೆಯೆ

೩

ಬಾಳ ಗೋಳೊಳು ನಗೆಯೆ ತೇಲಲು
   ಅದುವೆ ನಮ್ಮ ಜೀವನಾ
   ಬದುಕಲೆಮ್ಮ ಸಾಧನಾ
ಹರಯದೆಲರ ಕಂಪಿಗಿದರ ಸೊಂಪು ಗೆಳತಿಯೆ ;
ಬೆರೆಯಲದರ ಪೆಂಪು ಮಧುರ ನೋಡು ನಮಗೆಯೆ

೪

ಗೋಳ ಗುರುತಿಸಿ ಬಾಳನುರುಳಿಸಿ
   ಯಾಕ ಕೊಲೆಯು ನಿಂದೆಯೆ ?
   ಸಾಕು, ಸಾಗು ಮುಂದೆಯೆ.
ಮುಂದು ಮುಂದು ಮುಂದಕೆಂದು ಬಂದ ಚೆದುರಿಯೆ ;
ಬೆದರಬೇಡ ಹೆದರಬೇಡ ನಿನಗೆ ನಾನೆಯೆ

೫

ನಿನಗೆ ನಾನೆಯೆ ನನಗೆ ನೀನೆಯೆ
ನೀನೆ ನನಗೆ ಜೀವನಾ
ನಾನೆ ನಿನಗೆ ಪಾವನಾ
ನನಗೆ ನೀನು ನಿನಗೆ ನಾನು ಎಂಬ ಭಾವನಾ ;
ಮನದ ತಾನದಲ್ಲಿ ಲೀನ ಧನ್ಯ ಜೀವನಾ

# ಬಲ್ಲವಳು

೧

ಉಳ್ಳವರಿಗಿಂತಲೂ ಬಲ್ಲವರು ಮೇಲೆಂದು
ಬಲ್ಲ ಹೆಣ್ಣಿನ ಹಾಂಗ ನುಡಿದು ಬಂದಿ
ಮಳ್ಳ ಮಾತಿನ ಕಲೆಯನೆಲ್ಲಿ ಕಲಿತೆಯೆ ನೀನು
ಇಲ್ಲದವುಗಳ ಸಂತೆ ನೆರಸಿ ನಿಂದಿ

೨

ಬದುಕಿ ಬಾಳುವ ಜೀವಿ ಬಯಲ ಮೇಯುವದೇನೆ ?
ಇರುವ ಹಂಬಲದಲ್ಲಿ ಜೀವ ಸೊಗಸು,
ಬೆದಕಿ ಕಚ್ಚಾಡಿದರೆ ಹುಚ್ಚು ಹರಿಯುವದೇನೆ ?
ಹರಿವ ಜೀವನದಲ್ಲಿ ಭಾವ ಬಿರುಸು

೩

ಜೀವಿತಕ್ಕಿಂತಲೂ ಜೀವನಕೆ ಬೆಲೆಯೆಂದು
ಮದುವೆ ನಿಲ್ಲುವ ಮೊದಲು ನುಡಿದ ಗರತಿ
ಭಾವದುಂಬಿದ ಕವನ ವೈಗೂಡಿದಂತಿರುವ
ಮೊದಲ ಮಾತಿನ ನೆನಹನೆಲ್ಲಿ ಮರೆತಿ ?

೪

ಇರುವ ಜೀವನದಾಗ ಬೆರೆತಷ್ಟು ಬಾಳಿಗಿದೆ
ಇಲ್ಲದವುಗಳ ಹಗ್ಗ ಕೊರಳ ಸುತ್ತ
ಹರವಿಕೊಳ್ಳುವ ಭರದಿ ಬಾಳುಸಿರು ಬತ್ತಿದರ
ಎಲ್ಲ ಪಾಪದ ಲೆಕ್ಕ ನಿನ್ನ ಸುತ್ತ

೫

ಉಳ್ಳವರಿಗಿಂತಲೂ ಬಲ್ಲವರು ಮೇಲೆಂದು
ಬಲ್ಲ ಹೆಣ್ಣಿನ ಹಾಂಗ ನುಡಿದು ಬಂದಿ ;
ಮಳ್ಳಮಾತಿನ ಕಲೆಯನೆಲ್ಲಿ ಕಲಿಕೆಯೆ ನೀನು
ಇಲ್ಲದವುಗಳ ಸಂತೆ ನೆರಸಿ ನಿಂದಿ.

## ಚಿದುರಿ

೧

ನಗು ನಗುತ ಕವಿಯ ರಸಗಯ್ಯ ಹಿಡಿದ ಚಿದುರಿ !
ನಗೆಯ ನಿಲ್ಲಿಸಬೇಡ
ಬಗೆಯ ಘಲ್ಲಿಸಬೇಡ
ನೆಗೆತ ತಪ್ಪಿದ ಹೆಜ್ಜೆ ಹಾಕಬೇಡ.
ನನ್ನ ತಗುಬಗೆಯಲ್ಲಿ
ನಿನ್ನ ನಗೆಮೊಗವಲ್ಲಿ
ಹೊನ್ನರಳ ನರಳಿಪುದ ನೆಸೆಯ ಬೇಡ.

೨

ಕುಣಿ ಕುಣಿದು ಕವಿಯ ಮನಸೆಳೆದು ನಿಂತ ಚಿದುರಿ !
ದಣಿವ ಲೆಕ್ಕಿಸಬೇಡ
ಮಣಿತ ಮುಗ್ಗಿಸಬೇಡ
ಕುಣಿತಕ್ಕೆ ಮುಗಿತಾಯವೆನ್ನಬೇಡ
ಬಾಳ ಗೀಳಿನ ಲೆಕ್ಕ
ವೇಳು ಬೀಳಿನ ದುಕ್ಕ
ಕುಣಿತಕ್ಕೆ ಕಾಲ್ತೊಡಕು ಎನ್ನಬೇಡ.

೩

ಸುಖದಲ್ಲಿ ದುಃಖದಲ್ಲಿ ನನ್ನವಳು ನೀನು ಚಿದುರಿ !
ನಕ್ಕವರ ಜತೆಯಲ್ಲಿ
ನಕ್ಕಷ್ಟೆ ಉಳಿತಾಯ
ಮಿಕ್ಕ ಕಾಳಿನ ಚಿಂತೆ ಸಂತೆಗಿರಲಿ
ನಕ್ಕು ನಲಿಯುವದೆಲ್ಲ
ಸಿಕ್ಕವರ ಸೊತ್ತಲ್ಲ
ನಕ್ಕಷ್ಟೆ ನಮ್ಮದಿದೆ ಜೀವದುಸಿರು

# ಬಾಳ ತೇರು

೧

ನಾನೊಂದು ನುಡಿಯುತಿರೆ ನೀನೊಂದು ನೆನೆಯುತಿಹೆ
ಚೆಂದವೇ ? ತಗೆ
ನಾನೊಂದು ಈ ಗಾಲಿ ನೀನೊಂದು ಆ ಗಾಲಿ
ಬಾಳ ತೇರಿಗೆ
ಎಂದಾಗ ನಾ ನಲ್ಲೆ ಹುಸಿನಗೆಯ ನೀ ಚೆಲ್ಲೆ
ತೇರ ನೂಕಿದೆ
ಇಂದೇಕೆ ಆ ಮಾತು ಒಮ್ಮೆಲೇ ಸಾಕಾತು
ಆವ ನೋವಿದೆ ?
ತೇರ ತೇಲಿಪ ಗಾಲಿಗೆಲ್ಲಿಹುದು ರಹದಾರಿ
ಪಾದಗಟ್ಟಿಗೆ
ತೇರು ತೇಲುತಲಿರಲು ಹೊರಟದ್ದು ಹೊಸದಾರಿ
ಜೀವ ಯಾತ್ರೆಗೆ
ಸರಸದಲಿ ಸಂತೋಷ ಜೀಕುತಿದೆ, ವಿರಸದಲಿ
ಬಾಳ ಬಿರುಸರ
ಸರಸ ವಿರಸದ ಜೋಡು ಜೀವ ಜನ್ಮದ ಪಾಡು
ಬಾಳಿಗಾಸರ
ಬಾಳ ಹೊಂದೇರಿನಲಿ ಪಯಣ ಬಯಸಿದರಾರು ?
ಬಾಳ ಬಳಸಿಯೆ
ಬಾಳ ತಗುಬಗೆಯಲ್ಲಿ ಜೀವ ಹೊಸೆದಿಹರಾರು ?
ಬಾಳ ಬಯಸಿಯೆ

೨

ನಿನ್ನ ಸವಿಬಾಯಿಂದ ಬರುವ ಮಾತಿನ ಕಹಿಯು
   ಬಾಳ ಬೇಸರ
ಚೆನ್ನೆ! ಜೀವನ ಝರಿಯು ಮಸಣಕ್ಕೆ ತಿರುಗೀತು
   ಎಚ್ಚರೆಚ್ಚರ
ಬಾಳ ಕಲರವದಲ್ಲಿ ಕಲಹವೇ ಗುರಿಯಾಗೆ
   ಬಾಳಿಗೇನಿದೆ ?
ಸಂಸಾರ ಸಮರದಲಿ ಸಮರವೇ ಕೊನೆಯಾಗೆ
   ಸೌಖ್ಯವೆಲ್ಲಿದೆ ?

೩

ಬಾಳ ತೇರಿನ ದೇವ ತೇರ ಹೂಡಿಹನಿಂದು
   ತೇರು ಸಾಗಲಿ
ಕಲ್ಲಿರಲಿ ಮುಳ್ಳಿರಲಿ ಮುಗ್ಗದೆಂದಿಗು ಮುಂದು
   ಜೀವ ಪಥದಲಿ
ತೇರ ಗಾಲಿಗಳೆರಡು ತೇರ ನಡೆಯಿಸಲಿಂದು
   ತೇರ ಜೋಲಿಗೆ
ತಾಳುತಿಹ ಬಾಳುತಿಹ ನಿಲುಕಡೆಗೆ ನಿಲ್ಲಿಸುವ
   ಭಾರ ಗಾಲಿಗೆ

# ಅಂತರ

ನಲ್ಲ

'ನನಗೂ ನಿನಗೂ ಎಂತಹ ಅಂತರ
ಕೊನೆಗೂ ನಿಲ್ಲುವದೀ ಮಹದಂತರ
ಹೇಳಲು ಭಯ ನಲ್ಲೆ
ಹೆದರಿಕೆ ನಾನೊಲ್ಲೆ'

ನಲ್ಲೆ

'ದೊರೆ ನೀ ಜೈವನ ಸಿರಿಯೆಂದೆನ್ನುತ
ಹಗಲೂ ಇರುಳೂ ಸೇವೆಯು ಸನ್ನುತ
ನಿನಗಿರೆ ನನ್ನಿಂದೆ
ಅಂತರವಿಹುದಂತೆ!'

ನಲ್ಲ

'ಗಂಡಿನ ಘನತೆಗೆ ಹೆಣ್ಣಿನ ಸೇವೆಯು
ನಿತ್ಯ ನಿರಂತನವಾಗಿಹ ಪೂಜೆಯು
ಬಲ್ಲೆನು ಅದಕೆಂದೆ
ಅಂತರವಿಹುದೆಂದೆ'

ನಲ್ಲೆ

'ಒಲುಮೆಯು ಜೀವನವಲ್ಲವೆ ಪಾವನ
ನನಗೂ ನಿನಗೂ ಪ್ರೇಮವೆ ಬಂಧನ
ವಾಗಿರೆ ಈ ಪರಿಯೆ
ಅಂತರವೇ ದೊರೆಯೆ.'

ನಲ್ಲ

'ಜೀವದ ಜತೆಯೊಳು ಪ್ರೇಮದ ನಿಧಿಯೇ
ತುಂಬಿದ ಮೈಯೊಳು ನೀನಾಗಿರುವೆಯೆ
ಆದರು ಇಹುದೊಂದೆ
ಅಂತರ ಬೇರೊಂದೆ.'

ನಲ್ಲೆ

‘ ಬುದ್ಧಿಯೊಳಂತರವೆಂಬುದು ಸರಿಯೇ
ಬುದ್ಧಿಯೇ ಜೀವನ ಸಿದ್ಧಿಯ ದೊರೆಯೆ.
ಜೀವನ ನಿನಗೆಂದೆ
ಮೋಸಲವಿಹುದೆಂದೆ.’

ನಲ್ಲ

‘ ಬುದ್ಧಿಯೊಳೆಲ್ಲರ ಮೀರಿಹ ಸರಸತಿ
ನನಗಾಗಿರುವಿಯೆ ಹೆಮ್ಮೆಯ ಮಾಸತಿ
ಆದರು ಇಹುದೊಂದೆ
ಅಂತರ ಬೇರೊಂದೆ ’

ನಲ್ಲೆ

‘ ಭಾವದ ನಿಲುವೆಗೆ ನಿಲುಕದ ಅಂತರ
ವಾವುದು ಬೇಗನೆ ಹೇಳು ದೊರೆ ’

ನಲ್ಲ

‘ ಭಾವದ ಗೊಂಬೆಯೆ ನೀನಾಗಿರುತಿರೆ
ಹೇಳಲು ಹೆದರಿಕೆ ಸುಮ್ಮನಿರೆ ’

ನಲ್ಲೆ

‘ ಮಂಜಿನ ಹನಿಗಳ ಶೀತಲ ಸ್ಪರ್ಶದಿ
ಮಿಡುಕುವ ಬಳ್ಳಿಯ ತೆರದಿಂದೆ........’

ನಲ್ಲ

‘ ........ನಿಂತಿಹೆಯಲ್ಲವೆ ಕಡು ಬಿನ್ನಾಣದಿ
ಬಳ್ಳಿಯೆ ಹೂ ಮೈ ತೆರೆದಂತೆ.’

ನಲ್ಲೆ

‘ ಬೆಡಗಿನ ನುಡಿಗಳ ನುಡಿಯುವುದೇತಕೆ
ಅಂತರವಾವುದು ಹೇಳೊಮ್ಮೆ’

ನಲ್ಲ
‘ ಸಿಡುಕಿನ ಸುಂದರಿಗೆಂತಹ ಚೆಲುವಿದೆ
ಧನ್ಯನು ನಾನೇ ಕೇಳೊಮ್ಮೆ’

ನಲ್ಲೆ
‘ ಸುಂದರ ಬಂಧುರವೆನ್ನುವ ಮಾತಿನೊ
ಳಂತರವಾವುದು ಹೇಳು ದೊರೆ ’

ನಲ್ಲ
ಅಂತರವಿಹುದೇ ಮಹದಂತರವು........’

ನಲ್ಲೆ
‘ ಆವುದು ಆವುದು ಹೇಳು ದೊರೆ........’

ನಲ್ಲ
‘ ಹೇಳುವದೇನಿದೆ ಕೇಳದಿರೆ ’

ನಲ್ಲೆ
‘ ಕೇಳಲು ಆತುರ ಹೇಳು ದೊರೆ ’

ನಲ್ಲ
‘ ನೀ ಹೆಣ್ಣೆಂಬುದೆ ಆ ಅಂತರ
ನಾ ಗಂಡೆಂಬುದೆ ಮಹದಂತರ
ನನಗೂ ನಿನಗೂ ಎಂತಹ ಅಂತರ
ಕೊನೆಗೂ ನಿಲ್ಲುವದೀ ಮಹದಂತರ
ಹೇಳಲು ಭಯ ನಲ್ಲೆ
ಹೆದರಿಕೆ ನಾನೊಲ್ಲೆ.

* * *

‘ ಇದು ಮಹದಂತರ ’ವೆನ್ನುತ ಬಾಲೆಯು
ನಲ್ಲನ ಬರಸೆಳೆದಪ್ಪುತ ನುಡಿದಳು
‘ ಅಂತರ ’ವೆನ್ನುತ ಕಾಡಿದೆ ನೀ ದೊರೆ
ಅಂತರ ವೀಗೆಲ್ಲಿಹುದು ದೊರೆ ?

# ಚೆದುರಿ

೧

ನಗು ನಗುತ ಕವಿಯ ರಸಗಯ್ಯ ಹಿಡಿದ ಚೆದುರಿ !
  ನಗೆಯ ನಿಲ್ಲಿಸಬೇಡ
  ಬಗೆಯ ಘಲ್ಲಿಸಬೇಡ
ನೆಗೆತ ತಪ್ಪಿದ ಹೆಜ್ಜೆ ಹಾಕಬೇಡ.
  ನನ್ನ ತಗುಬಗೆಯಲ್ಲಿ
  ನಿನ್ನ ನಗೆವೊಗವಲ್ಲಿ
ಹೊನ್ನರಳ ನರಳಿಪುದ ನೆಸೆಯ ಬೇಡ.

೨

ಕುಣಿ ಕುಣಿದು ಕವಿಯ ಮನಸೆಳೆದು ನಿಂತ ಚೆದುರಿ !
  ದಣಿವ ಲೆಕ್ಕಿಸಬೇಡ
  ಮಣಿತ ಮುಗ್ಗಿಸಬೇಡ
ಕುಣಿತಕ್ಕೆ ಮುಗಿತಾಯವೆನ್ನಬೇಡ
  ಬಾಳ ಗೀಳಿನ ಲೆಕ್ಕ
  ವೇಳು ಬೀಳಿನ ದುಕ್ಕ
ಕುಣಿತಕ್ಕೆ ಕಾಲ್ತೊಡಕು ಎನ್ನಬೇಡ.

೩

ಸುಖದಲ್ಲಿ ದುಃಖದಲ್ಲಿ ನನ್ನವಳು ನೀನು ಚೆದುರಿ !
  ನಕ್ಕವರ ಜತೆಯಲ್ಲಿ
  ನಕ್ಕಷ್ಟೆ ಉಳಿತಾಯ
ಮಿಕ್ಕ ಕಾಳಿನ ಚಿಂತೆ ಸಂತೆಗಿರಲಿ
  ನಕ್ಕು ನಲಿಯುವದೆಲ್ಲ
  ಸಿಕ್ಕವರ ಸೊತ್ತಲ್ಲ
ನಕ್ಕಷ್ಟೆ ನಮ್ಮದಿದೆ ಜೀವದುಸಿರು

# ಬಾಳ ತೇರು

೧

ನಾನೊಂದು ನುಡಿಯುತಿರೆ ನೀನೊಂದು ನೆನೆಯುತಿಹೆ
ಚೆಂದವೇ ? ತಗೆ
ನಾನೊಂದು ಈ ಗಾಲಿ ನೀನೊಂದು ಆ ಗಾಲಿ
ಬಾಳ ತೇರಿಗೆ
ಎಂದಾಗ ನಾ ನಲ್ಲೆ ಹುಸಿನಗೆಯ ನೀ ಚೆಲ್ಲೆ
ತೇರ ನೂಕಿದೆ
ಇಂದೇಕೆ ಆ ಮಾತು ಒಮ್ಮೆಲೇ ಸಾಕಾತು
ಆವ ನೋವಿದೆ ?
ತೇರ ತೇಲಿಪ ಗಾಲಿಗೆಲ್ಲಿಹುದು ರಹದಾರಿ
ಪಾದಗಟ್ಟಿಗೆ
ತೇರು ತೇಲುತಲಿರಲು ಹೊರಟಿದ್ದ ಹೊಸದಾರಿ
ಜೀವ ಯಾತ್ರೆಗೆ
ಸರಸದಲಿ ಸಂತೋಷ ಜೀಕುತಿದೆ, ವಿರಸದಲಿ
ಬಾಳ ಬಿರುಸರ
ಸರಸ ವಿರಸದ ಜೋಡು ಜೀವ ಜನ್ಮದ ಪಾಡು
ಬಾಳಿಗಾಸರ
ಬಾಳ ಹೊಂದೇರಿನಲಿ ಪಯಣ ಬಯಸಿದರಾರು ?
ಬಾಳ ಬಳಸಿಯೆ
ಬಾಳ ತಗುಬಗೆಯಲ್ಲಿ ಜೀವ ಹೊಸೆದಿಹರಾರು ?
ಬಾಳ ಬಯಸಿಯೆ

೨

ನಿನ್ನ ಸವಿಬಾಯಿಂದ ಬರುವ ಮಾತಿನ ಕಹಿಯು
   ಬಾಳ ಬೇಸರ
ಚೆನ್ನೆ! ಜೀವನ ಝರಿಯು ಮಸಣಕ್ಕೆ ತಿರುಗೀತು
   ಎಚ್ಚರೆಚ್ಚರ
ಬಾಳ ಕಲರವದಲ್ಲಿ ಕಲಹವೇ ಗುರಿಯಾಗೆ
   ಬಾಳಿಗೇನಿದೆ ?
ಸಂಸಾರ ಸಮರದಲಿ ಸಮರವೇ ಕೊನೆಯಾಗೆ
   ಸೌಖ್ಯವೆಲ್ಲಿದೆ ?

೩

ಬಾಳ ತೇರಿನ ದೇವ ತೇರ ಹೂಡಿಹನಿಂದು
   ತೇರು ಸಾಗಲಿ
ಕಲ್ಲಿರಲಿ ಮುಳ್ಳಿರಲಿ ಮುಗ್ಗದೆಂದಿಗು ಮುಂದು
   ಜೀವ ಪಥದಲಿ
ತೇರ ಗಾಲಿಗಳೆರಡು ತೇರ ನಡೆಯಿಸಲಿಂದು
   ತೇರ ಜೋಲಿಗೆ
ತಾಳುತಿಹ ಬಾಳುತಿಹ ನಿಲುಕಡೆಗೆ ನಿಲ್ಲಿಸುವ
   ಭಾರ ಗಾಲಿಗೆ

# ಅಂತರ

ನಲ್ಲ

‘ ನನಗೂ ನಿನಗೂ ಎಂತಹ ಅಂತರ
ಕೊನೆಗೂ ನಿಲ್ಲುವದೀ ಮಹದಂತರ
ಹೇಳಲು ಭಯ ನಲ್ಲೆ
ಹೆದರಿಕೆ ನಾನೊಲ್ಲೆ ’

ನಲ್ಲೆ

‘ ದೊರೆ ನೀ ದೈವದ ಸಿರಿಯೆಂದೆನ್ನುತ
ಹಗಲೂ ಇರುಳೂ ಸೇವೆಯು ಸನ್ನುತ
ನಿನಗಿರೆ ನನ್ನಿಂದೆ
ಅಂತರವಿಹುದಂತೆ ! ’

ನಲ್ಲ

‘ ಗಂಡಿನ ಘನತೆಗೆ ಹೆಣ್ಣಿನ ಸೇವೆಯು
ನಿತ್ಯ ನಿರಂತನವಾಗಿಹ ಪೂಜೆಯು
ಬಲ್ಲೆನು ಅದಕೆಂದೆ
ಅಂತರವಿಹುದೆಂದೆ ’

ನಲ್ಲೆ

‘ ಒಲುಮೆಯ ಜೀವನವಲ್ಲವೆ ಪಾವನ
ನನಗೂ ನಿನಗೂ ಪ್ರೇಮವೆ ಬಂಧನ
ವಾಗಿರೆ ಈ ಪರಿಯೆ
ಅಂತರವೇ ದೊರೆಯೆ.’

ನಲ್ಲ

‘ ಜೀವದ ಜತೆಯೊಳು ಪ್ರೇಮದ ನಿಧಿಯೇ
ತುಂಬಿದ ಮೈಯೊಳು ನೀನಾಗಿರುವೆಯೆ
ಆದರು ಇಹುದೊಂದೆ
ಅಂತರ ಬೇರೊಂದೆ.’

ನಲ್ಲೆ

' ಬುದ್ದಿಯೊಳಂತರವೆಂಬುದು ಸರಿಯೇ
ಬುದ್ಧಿಯೇ ಜೀವನ ಸಿದ್ಧಿಯ ದೊರೆಯೆ.
ಜೀವನ ನಿನಗೆಂದೆ
ಮಿಾಸಲವಿಹುದೆಂದೆ.'

ನಲ್ಲ

' ಬುದ್ಧಿಯೊಳೆಲ್ಲರ ಮೀರಿಹ ಸರಸತಿ
ನನಗಾಗಿರುವಿಯೆ ಹೆಮ್ಮೆಯ ಮಾಸತಿ
ಆದರು ಇಹುದೊಂದೆ
ಅಂತರ ಬೇರೊಂದೆ '

ನಲ್ಲೆ

' ಭಾವದ ನಿಲುಮೆಗೆ ನಿಲುಕದ ಅಂತರ
ವಾವುದು ಬೇಗನೆ ಹೇಳು ದೊರೆ '

ನಲ್ಲ

' ಭಾವದ ಗೊಂಬೆಯೆ ನೀನಾಗಿರುತಿರೆ
ಹೇಳಲು ಹೆದರಿಕೆ ಸುಮ್ಮನಿರೆ '

ನಲ್ಲೆ

' ಮಂಜಿನ ಹನಿಗಳ ಶೀತಲ ಸ್ಪರ್ಶದಿ
ಮಿಡುಕುವ ಬಳ್ಳಿಯ ತೆರದಿಂದೆ........'

ನಲ್ಲ

' ........ನಿಂತಿಹೆಯಲ್ಲವೆ ಕಡು ಬಿನ್ನಾಣದಿ
ಬಳ್ಳಿಯೆ ಹೂ ಮೈ ತೆರೆದಂತೆ.'

ನಲ್ಲೆ

' ಬೆಡಗಿನ ನುಡಿಗಳ ನುಡಿಯುವುದೇತಕೆ
ಅಂತರವಾವುದು ಹೇಳೊಮ್ಮೆ'

ನಲ್ಲ

‘ ಸಿಡುಕಿನ ಸುಂದರಿಗೆಂತಹ ಚೆಲುವಿದೆ
ಧನ್ಯನು ನಾನೇ ಕೇಳೊಮ್ಮೆ’

ನಲ್ಲೆ

‘ ಸುಂದರ ಬಂಧುರವೆನ್ನುವ ಮಾತಿನೊ
ಳಂತರವಾವುದು ಹೇಳು ದೊರೆ ’

ನಲ್ಲ

ಅಂತರವಿಹುದೇ ಮಹದಂತರವು........’

ನಲ್ಲೆ

‘ ಆವುದು ಆವುದು ಹೇಳು ದೊರೆ........’

ನಲ್ಲ

‘ ಹೇಳುವದೇನಿದೆ ಕೇಳದಿರೆ ’

ನಲ್ಲೆ

‘ ಕೇಳಲು ಆತುರ ಹೇಳು ದೊರೆ ’

ನಲ್ಲ

‘ ನೀ ಹೆಣ್ಣೆಂಬುದೆ ಆ ಅಂತರ
ನಾ ಗಂಡೆಂಬುದೆ ಮಹದಂತರ
ನನಗೂ ನಿನಗೂ ಎಂತಹ ಅಂತರ
ಕೊನೆಗೂ ನಿಲ್ಲುವದೀ ಮಹದಂತರ
ಹೇಳಲು ಭಯ ನಲ್ಲೆ
ಹೆದರಿಕೆ ನಾನೊಲ್ಲೆ.

* * *

‘ ಇದು ಮಹದಂತರ ’ವೆನ್ನುತ ಬಾಲೆಯು
ನಲ್ಲನ ಬರಸೆಳೆದಪ್ಪುತ ನುಡಿದಳು
‘ ಅಂತರ ’ವೆನ್ನುತ ಕಾಡಿದೆ ನೀ ದೊರೆ
ಅಂತರ ವೀಗೆಲ್ಲಿಹುದು ದೊರೆ ?

## ದಮಯಂತಿ

೧

ದಮಯಂತಿ ದೇವಿ ಎಚ್ಚರಾದಳು ।
ದಮಯಂತಿ ದೇವಿ ಎಚ್ಚರಾದಳು ॥
ಎಚ್ಚರಾಗಿ ಸುತ್ತ ನೋಡಿ
‘ ನಲ್ಲ ’ ಎಂದು ಕೂಗಲಾಗ
ಸೊಲ್ಲು ಮರಳಿ ಕೇಳಲಿಲ್ಲವು
ನಳನ ದನಿಯು
ಮಧುರ ನಾದ ತಿರುಗಲಿಲ್ಲವು

೨

ಕಾಂತ ! ಕಾಂತ ! ಕಾಂತನೆನುತ
ಭ್ರಾಂತಳಾಗಿ ನಳನ ದೇವಿ
ಚಿಂತೆಯಿಂದಲೆದ್ದು ಬಂದಳು
ಕಾಡ ನೋಡಿ
ಭೀತಿಯಿಂದ ಬೆಚ್ಚಿಬಿದ್ದಳು.

೩

“ ಘೋರವಾದರಣ್ಯದಲ್ಲಿ
ಸಾರಿ ನಿಂತ ಕತ್ತಲಲ್ಲಿ
ರಾಯನೆನ್ನ ತೊರೆದು ಪೋದನೆ ?
ಅಯ್ಯೊ! ವಿಧಿಯೆ
ರಮಣನುಳಿದು ಬಾಳಲಾರೆನೆ.

೪

ನಿನ್ನ ಬಿಟ್ಟು ದೈವವಿಲ್ಲ
ವೆನುತ ರಾಯ ನಿನ್ನ ನಂಬಿ
ದವಳನೆಂತು ಮರೆದು ಪೋದೆಯೊ ?
ಕ್ರೂರ ವಿಧಿಯು
ಬೆನ್ನು ಬಿದ್ದು ಪೋದುದೆಲ್ಲಿಯೊ ?

೫

ನಲ್ಲೆ ಎಂದು ನಲ್ಮೆಯಿಂದ
ಕರೆವ ದನಿಯು ಮಾಯವಾಗಿ
ಪ್ರೇಮರಜ್ಜು ಹರಿದು ಹೋಯಿತೆ ?
ಕೂರ್ಮೆಗಡಲು
ಉಕ್ಕಿ ಬಂದು ಒಡೆದು ಹೋಯಿತೆ ?

೬

ಕಾಡಿನಲ್ಲಿ ಹೆಣ್ಣನೊಂದ
ದೂಡಿ ವ್ಯಾಘ್ರನಖದ ಮುಂದೆ
ಓಡಿಹೋದ ಹದನವಾವುದೊ ?
ಕೆಳೆಯತನದ
ಕೀಲು ಮುರಿದ ಮಾತದಾವುದೊ ? "

೭

ಹೀಗೆ ದೇವಿ ವಿರಹತಾಪ
ಬೇಗೆಯಿಂದ ಬೆಂದು ಬಳುಕಿ
ಹುಚ್ಚಳಂತೆ ದಿಗ್ಗನೆದ್ದಳು ;
ಎದ್ದು ನಿಲಲು
ಮೂರ್ಛೆ ತಬ್ಬಿ ಬಿದ್ದುಬಿಟ್ಟಳು.

# ಮದುವೆ

೧

ಅಂದದ ಚೆಂದದ ಗಂಧದ ಗುಡಿಯೊಳು
ಮದುವೆಯ ಮಂಟಪ ಮೆರೆದಿತ್ತು
ಚೆಂದನ ಬತ್ತಿಯ ಸುಗಂಧವೆಲ್ಲೆಡೆ
ಹೂಗಳ ಪರಿಮಳ ಮೀರಿತ್ತು.

೨

ಕೆಣಕುವ ಕಂಗಳ ಕಾಂತಿ ವಿಲಾಸದ
ಕಾಂತಾನಿವಹವೆ ನೆರೆದಿತ್ತು
ಬಾಳಿನ ಬೆಳಕಿಗೆ ಬೆಳಕನ್ನೀಯುವ
ಕಡು ಬೆಳಗೇ ಹೊಳೆ ಹರಿಸಿತ್ತು.

೩

ಸುತ್ತಲು ಮುತ್ತಲು ಮಂದಸ್ಮಿತವೇ
ತಾವರೆಮೊಗದೊಳು ತುಂಬಿತ್ತು
ತುಂಬಿದ ಮುಖದೊಳು ತುಂಬಿಯ ಸರವೇ
ಸರಾಗವಾಗಿಯೆ ಸೂಸಿತ್ತು.

೪

ಜೀವನವರಸುವ ಜೀವದ ಹಾಡೇ
ಜೇನಿನ ಮಳೆಯನು ಕರೆದಿತ್ತು
ಭಾವಕನ್ನಿಕೆಯ ಜೀವದ ಜೋಡೇ
ಹಾಲಿನ ಹೊಳೆಯನು ಹರಿಸಿತ್ತು.

೫

ಕಾಮನ ಬಿಲ್ಲಿನ ಕಣ್ಣನು ತಪ್ಪಿಸಿ
ಮಲ್ಲಿಗೆಯಲ್ಲಿಯೆ ಬಂದಿತ್ತು
ಬೆಡಗಿನ ಬಾಲೆಯರೆಲ್ಲರನೊಪ್ಪಿಸಿ
ಪೂಸರದಲ್ಲಿಯೆ ಕೋದಿತ್ತು.

೬

ಚಂಚಲ ನೋಟದ ಮಿಂಚಿನ ಗೊಂಚಲ
ನಗೆತೆರೆವೋಡದಿ ಮಿಂಚಿತ್ತು
ಬಾಸಿನ ಬಯಲೊಳು ಮಿನುಗುವ ತಾರಾ
ಬಳಗವೆ ಮದುವೆಗೆ ಬಂದಿತ್ತು

೭

ಮುಂದಿನ ಜೀವನವೆಂತೋ ಎನ್ನುವ
ಓಲಗ ಕೀಸರವಿಡುತಿತ್ತು
ಮದುವೆಯ ಮೊದಲೇ ಮಂಗಳವೆನ್ನುವ
ಮಂತ್ರಧ್ವನಿಯೇ ಅಡಗಿತ್ತು.

೮

ಚೆಲುವೆಯು ಸಿರಿಮುಡಿ ಸೊಂಪಿನ ಬಳ್ಳಿಯು
ಬಳುಕುತ ಬಂದಳು ಮಂಟಪಕೆ
ಜೀವನ ಬಗೆಯೊಳು ಭಾವೋನ್ಮಾದಿಯು
ಭಾವತರಂಗಿಣಿ ಬಂಧನಕೆ

೯

ಹಳದಿಯ ಪತ್ತಲದುಡಿಗೆಯ ಹುಡುಗೆಯು
ಕಡು ಬಿನ್ನಾಣದಿ ಬಂದಂತೆ
ಕಲಕಲ ರವದಲಿ ಜೀವನ ಬಂಧನ
ಬೆಡಗಿನ ರೂಪವ ತಳೆದಂತೆ

೧೦

ಅರಳಿದ ಮಲ್ಲಿಗೆ ಕುಲುಕುಲು ನಕ್ಕಿತು
ಸಿರಿಮುಡಿಯಂಚಿನ ಮರೆಯಿಂದೆ
ದಂಡೆಗೆ ಸಿಲುಕಿದ ಬಿರಿದಲರೆಂದಿತು
ನನಗೂ ಬಂಧನ ನಿನ್ನಂತೆ.

೧೧

ಸೇಸೆಯ ಸೊಲ್ಲಿಗೆ ಕಲಕಲವೆದ್ದಿತು
ಜೀವನ ರಥವೇ ಓಡಿದಂತೆ
ಮಾಸದ ಹೆಣ್ಣಿನ ಮೀಸಲು ಮುರಿಯಿತು
ಹೂವಿನ ಮಾಲೆಯು ಕೊರಳಿಂದೆ

೧೨

ತುಂಬಿದ ಮುಖದೊಳು ತಾವರೆಯರಳಿತು
ತುಂಬಿಗೆ ಸಂತಸವಾದಂತೆ
ಬಂಧುರ ಭಾವದ ಗುಂಜಾರವದೊಳು
ಪರಮೆಯ ಪಕ್ಕವ ಪಡೆದಂತೆ

೧೩

ಗಾಯನದಿಂಚರದುಂಬಿದ ಕಡೆಯೊಳು
ಮಂಗಲಗೀತವೆ ಜನಕೆಲ್ಲ
ಬಂದಿಹ ಬಳಗಕೆ ಚೆಂದದ ಗುಡಿಯೊಳು
ಮದುವೆಯ ಮಾತೇ ಹಗಲೆಲ್ಲ.

೧೪

ಅಂದಿನ ಮದುವೆಯ ನೆನೆನೆನೆದಂತೆಯೆ
ಪುಳುಕಿತವಾಗುವದೀ ತನುವು
ಇಂದಿನ ಬಾಳನು ನೆನೆನೆನೆದಂತೆಯೆ
ಅಳಕುತ ನಿಲ್ಲುವದೀ ಮನವು

# ಕಹಿ — ಜೇನು !

೧

ದಿನದಿನವು ಸಂಜೆ ಸರಿಯುತ್ತಲಿರುಳು
ಮತ್ತೊಮ್ಮೆ ಉದಯಕಾಲ
ಬೆಳಬೆಳಗಿದಂತೆ ಹಿಡಿಯುತ್ತಲಿಹುದು
ಜನುಮಕ್ಕೆ ಜನುಮ ತಾಳ
ಆ ದಿನವು ಬಂತು ಈ ದಿನವು ಹೋಯ್ತು
ಹೋದಂತೆ ಮರಳಿ ನೋಡು
ದಿನಕಿಲ್ಲ ಸಾವು ನಮಗಿಹುದು ನೋವು
ನೋಯುವದೆ ನಮ್ಮ ಪಾಡು
ಅಂದೊಂದು ಹಾಳು ಇಂದೊಂದು ಗೋಳು
ಮುಂದಾವ ಕಣ್ಣ ನೀರು
ಎಂದೆಂಬ ಭಾವ ಬಲಿದಂತೆ ಜೀವ
ಹರಿಸುತ್ತಲಿಹುದು ಬೆವರು
ಬೇಸರಿದ ಜೀವ ಬೇಸತ್ತು ನೋವ
ಜನುಮಕ್ಕೆ ಜೋತುಬಿದ್ದು
ಜೀಕುತ್ತ ಸಾಗಿ ದಣಿದಾಗ ಬಾಗಿ
ತಿರುಗುಪ್ಪ ಹೂಡುತೆದ್ದು
ತಳಮಳಿಸಿ ಸೋತು ಹೊಡಮರಳಿ ನೋಡಿ
ಹೌಹಾರಿ ಹೋಯಿತಿಂದು
ಈ ಕಾಲ ಚಕ್ರದಂಗಾಲ ವಕ್ರ
ಗೆರೆಯನ್ನು ತುಳಿದು ನಿಂತು
  ಬಾಯಾರಿ ನಿಂತಿತಿಂದು
  ಈ ಜೀವ ಬಳಲಿ ಬಂದು
  ಬಾ ! ಗೆಳತಿ ! ನೋಡು ನೋಡು ;

ಆ ದಿನವು ಬಂತು ಬಂದಂತೆ ಹೋಯ್ತು
ಹೋದಂತೆ ಮರಳಿ ನೋಡು
ದಿನಕಿಲ್ಲ ಸಾವು ನಮಗಿಹುದು ನೋವು
ನೋಯುವದೆ ನಮ್ಮ ಪಾಡು.

೨

ಜೀವನವು ಸೊಗಸು ಜರೆಯುವದು ಬಿರಸು
ಜೀವಕ್ಕೆ ಜನುಮವಾಟಾ
ಅದಕಿಲ್ಲ ದಣಿವು ದಿನದಿನದ ತಣಿವು
ಕೈವಲ್ಯವದರ ನೋಟಾ
ಅದಕಾಗಿ ಬಾಳು ಬಾಳಿನಲಿ ಗೋಳು
ಕಾಣುವುದು ಕೀಳು, ನೋಡು
ಬಾಳುವದೆ ಬದುಕು ಜೀವನದ ಬೆಳಕು
ಬಾಳೆಮ್ಮ ಜೀವ ಹಾಡು
ದಿನದಿನದ ಪಾಡು ದಿನಕಿರಲಿ ನೋಡು
ಜನುಮಕ್ಕೆ ಜೀವದುಸಿರು
ಆ ದಿನವ ನೋಡಿ ಈ ದಿನವು ಹಾಡು
ಹಾಡುವದೆ ಬಾಳಿನುಸಿರು
ಆ ನೋವ ನೆನೆದು ಈ ಬಾಳ ಮುರಿದು
ಬದುಕುವದು ಯಾವ ಸೊಗಸು ?
ಆ ದಿನವು ಅಂದು ಮುಗಿದಂದು ಎಂದು
ಹೊರಡುವದು ನಮಗೆ ಲೇಸು
ಹಣ್ಣಾದ ಜೀವ ಹೈರಾಣ ಭಾವ
ಯಾತಕ್ಕೆ ಬಂತು ಬಾಳು ?
ಕಣ್ಣೊಡೆದ ಕಾಲ ಹೃದಯಕ್ಕೆ ಶೂಲ
ದುಗುಡಕ್ಕೆ ಹೊಂದಿ ಬಾಳು.

ಈ ಬಾಳು ನಿನ್ನದೇಳು !
ಜನುಮಕ್ಕೆ ಜನುಮು ತಾಳು
ಬಾ ! ಗೆಳತಿ ! ಕಾಲಕೀಳು !!
ಕಹಿಬಾಳ ಕಡೆದು ಸವಿಜೇನ ತೆಗೆದು
ಬಾಳುವದೆ ಮೇಲು ಮೇಲು
ದಿನಕಿಲ್ಲ ಸಾವು ನಮಗಿಹುದು ನೋವು
ನೋವನ್ನು ಮರೆತು ಬಾಳು.

## ಬೇಂದ್ರೆ

ಶಬ್ದಕೊಂದು ಜೀವದುಂಬಿ
　ಕುಣಿಸಿ ಬಿಟ್ಟೆ ತನನನಾ
ನುಡಿಯು ಜಾಡ ಹಿಡಿದು ಭಾವ
　ಮಣಿದು ಬರುತ ತನ್ಮನಾ
ಕಡಲು ಕೋಡೆವರಿದು ಬರುವ
　ನುಡಿ ಗಭೀರ ವಾದನಾ
ಮಡಲ ಕೂಸು ಮಾಡುತಿರುವ
　ತಾಯಿ ತೊಡೆಯ ರೋದನಾ
ನುಡಿವ ನುಡಿಗೆ ನಡೆಯ ಕಲಿಸಿ
　ದಂತೆ ಚಿತ್ರಬಂಧನಾ
ಭಾವದುಡಿಗೆಯುಟ್ಟ ಹುಡುಗೆ
　ನಲಿವ ಮುಂದು ನರ್ತನಾ
ಶಬ್ದ-ಭಾವ-ಛಂದದಲ್ಲಿ
　ನಿನ್ನ ಕಲೆಯು ಚಿನ್ಮಯಾ-
ನಂದ ರೂಪ ಧ್ಯಾನದಲ್ಲಿ
　ನಿನ್ನ ಯೋಗ ತನ್ಮಯಾ
ನಿನ್ನ ಕಯ್ಯ ಕುಸುರಿಗಿಂದು
　ರಸವು ಒರತೆ ತೋಡಿತು
ನನ್ನ ಸವಿಯ ಲಾಲಿಯಲ್ಲಿ
　ಜೇನರಸವು ತುಂಬಿತು.

## ಕೈಲಾಸಂ

ನುಡಿವ ನುಡಿಗಳ ಕಿಡಿಯು ನುಡಿದಂತೆ ಸಿಡಿದೆದ್ದು
ಸಿಂಹಮುಖದಲಿ ಹೊಳೆವ ಕಂಗಳಲಿ ಕುಣಿದಾಗ,
ಮಾತು ಮಾತಿಗೆ ಜನಿಸುತಿದೆಯ ಕಲಮಲವೆದ್ದು
ಮಾನವತೆ ಮನದಲ್ಲಿ ಮೈದಾಳಿ ನಿಂತಾಗ,
ನಿರ್ಮಿಸಿದ ಪಾತ್ರಗಳು ಜೀವನಾಡಿಯ ಮಿಡಿದು
ಜೀಕವಾಡುತಲಿರಲು, ನಿತ್ಯ ನೂತನ ನಿನ್ನ
ನಾಟ್ಯರಚನೆಯ ಸೃಷ್ಟಿಯಲ್ಲಿಟ್ಟ ಹೊಸ ದೃಷ್ಟಿ
ಪಾತ್ರಗಳ ಪರಿಪುಷ್ಟಿ ಕನ್ನಡದ ರಸಗಟ್ಟಿ
ನಿನ್ನಾತ್ಮರಂಗದಲಿ ಪಾತ್ರವಾಡುತಲಿರುವ
ಪಾತ್ರಗಳ ವಿವಿಧತೆಗೆ ರಂಗಭೂಮಿಯೆ ಕೊನೆಯೆ ?
ನಿನ್ನಾತ್ಮಜ್ಯೋತಿಯಲಿ ಪರಿಪಾಕಗೊಂಡಿರುವ
ಪಾತ್ರ ಪರಿವಾರಕ್ಕೆ ಅಮರ ಜೀವನ ಘನವೆ ?
ಆ ಪಾತು, ಆ ಸಾತು, ನಾಗತ್ತೆಗಳ ಬ್ರಹ್ಮ !
ಕರ್ಣೈಕಲವ್ಯರಿಗೆ ನೀ ವಿಶ್ವಕರ್ಮ !

## ಗಳಗನಾಥರಿಗೆ

ಕನ್ನಡದ ಸುಡಿವೆಣ್ಣು ಕಬ್ಬದುಡಿಗೆಯ ತೊಟ್ಟು
ಗಂಭೀರಗಮನದಲಿ ಪಂಡಿತರ ಕೋಲೂರಿ,
ರಾಜ ಪೈಖರಿಯಲ್ಲಿ ಮುಂದ ಹೆಜ್ಜೆಗಳಿಟ್ಟು
ಪಾಮರರ ಕಡೆಗಣಿಸಿ ಯಾಕಾಶ ಕುಸುಮಗಳ
ಕಂಪನಾಘ್ರಾಣಿಸುತ, ಕಲ್ಪವೃಕ್ಷದ ಹಣ್ಣ
ಸವಿಸೊದೆಯ ಸೊಗಕೆಂದು ಬಾಯ ಚಪ್ಪರಿಸುತ್ತ
ಸಗ್ಗಕಭಿಮುಖವಾಗಿ ಪಯಣಹೊರಟಿರುವಾಗ—
ಲಾಕೆಯನು ಕೆಣಕಿದಿರಿ ಗಳಗನಾಥರೆ ನೀವು !
ಕನ್ನಡದ ಸಾಹಿತ್ಯ ಸಾಮ್ರಾಜ್ಞಿ ತಾನಿಂದು
ರನ್ನ ಪೀಠವನಿಳಿದು ಸಾಮಾನ್ಯರೆದೆಯಲ್ಲಿ
ನಲವಾಂತು ನಿಂತಿಹುದು ನಿಚ್ಚಳದಿ ಕಂಡಾಗ
ನಿಮ್ಮ ಸೇವೆಯ ಮರೆತು ಬಾಳುವನೆ ಕನ್ನಡಿಗ ?
ನಿಮ್ಮ ಗದ್ಯದ ಶೈಲಿ ಕನ್ನಡದ ಜನಕಿತ್ತ
ದಿವ್ಯ ಕಾಣಿಕೆಯಾಯ್ತು ; ಹೆಸರು ಶಾಸನವಾಯ್ತು.

## ಮುದವೀಡು

ಕನ್ನಡದ ಘನತೆಯೋ ಮೈವೆತ್ತು ನಿಂತಂತೆ
ಭವ್ಯ ಭದ್ರಾಕೃತಿಯ ಸವ್ಯಸಾಚಿಯು ನೀನು
ಗಂಭೀರವಾಣಿಯಲಿ ಸೋತ ಕನ್ನಡ ಜನಕೆ
ಸೊದೆಯುಸಿರನುಸುರುತಿರೆ ಜಾಗ್ರತೆಯು ಘನವಾಯ್ತು.
ಹರಿದು ಹಂಚಿದ ನಾಡನೇಕಸೂತ್ರತೆಯಲ್ಲಿ
ತಂದ ಮಾತಿನ ಮಹಿಮೆ ನಿನ್ನ ಹಿರಿಮೆಗೆ ನಿಂತು
ನಾಡ ನುಡಿಯಾಗಸದಿ ಗುಡುಗಾಡುತಿರುವಾಗ
ಕನ್ನಾಡ ಗುಡಿಯಲ್ಲಿ ಕನ್ನಡತಿ ಬೆಳಗಿದಳು,
ಮುದವೀಡು ಮಡಿದರೇನಮರ ನುಡಿಯಡಗೀತೆ?
ನಿನ್ನ ಪುಣ್ಯಸ್ಮರಣ ನಮ್ಮ ದಿವ್ಯ ಸ್ಫುರಣ!
ಕನ್ನಡದ ಕುಲರಸಿಕ! ಕನ್ನಾಡ ದಾಸಯ್ಯ!
ಮನ್ನಣೆಯ ಶರಣನೀ ದಿವ್ಯನಾಟಕಕಾರ!
ನಿನ್ನ ಲೇಖನಕಲೆಗೆ ಕನ್ನಾಡು ಶರಣಾಯ್ತು;
ನಿನ್ನ ಮಾತಿನ ಮಳೆಗೆ ಕಲ್ಲರಳಿ ಹೂವಾಯ್ತು.

## ಕಾಳನ ಕೆರೆ

ನಮ್ಮೂರ ಪಡುವಣದ ಕಡೆಯಂಚಿನೆಡೆಯಲ್ಲಿ
ಬೆಳ್ಗೊಳವನೇಳಿಸುವ ಸವಿನೀರ ಜಲರಾಶಿ
ಕಾಳನಾ ಕೆರೆಯೆಂಬ ಹೆಸರಿನಿಂದಿಂದಿಗೂ
ಬತ್ತದಿಜೆ. ನಮ್ಮೂರ ಜನಗಳಿಗೆ, ಕಾಡು ಮೇ
ಡುಗಳಲ್ಲಿ ಮೇವುಬಹ ದನಗಳಿಗೆ, ಸವಿನೀರ
ಶಾಂತಿಯನ್ನೊದಗಿಸುವದೀ ಪುಣ್ಯ ಜಲರಾಶಿ.
ಬಿರುಬಿಸಿಲ ಬೇಸಗೆಗೆ ನದಿಯುಸೆಲೆ ಬತ್ತಿದರು
ಕೆರೆಯೊರತೆ ಬತ್ತೀತೆ? ಹನ್ನೆರಡು ತಿಂಗಳೂ
ತುಂಬಿತುಳುಕಾಡುತಿದೆ ತಿಳಿನೀರಿನೊರತೆಯಿದು,
ಸವಿನೀರ ಬುಗ್ಗೆಯಿದು. ಯಾರ ಪುಣ್ಯದ ಬಲದಿ
ಜಲರಾಶಿ ತುಳುಕಿತೋ, ಯಾವ ಘನತೆಯ ಮಹಿಮೆ
ಕೆರೆಯ ಸೆಲೆಯುಕ್ಕಿಪುದೊ ಆಮಹಿಮನಾರೆಂಬ
ಕತೆಯಾವುದಿಹುದೆಂಬ, ಕಾಳನಾ ಹೆಸರಿಗೂ
ಈ ಪುಣ್ಯ ಜಲಧಿಗೂ ಸಂಬಂಧವೇನೆಂಬ
ಕೌತುಕವು ಕಾಡುತಿರಲಜ್ಜನನು ಕೇಳಿದೆನು.
ನಮ್ಮೂರ ನೀರಿಗೂ ಕಾಳನಾ ಹೆಸರಿಗೂ
ಸಂಬಂಧವೇನಜ್ಜ? ಕಾಳನಾ ಹೆಸರೇಕೆ,
ಹೇಳುವಿಯ ಕೆರೆಗಜ್ಜ ? ಎಂದೆನಲು, ಕಣ್ಣಲ್ಲಿ
ನೀರ್ಮಿಡಿದು ಮುತ್ತಜ್ಜ ಹೇಳಿದನು ಮರೆಯದಿಹ
ಕತೆಯಿದನು. ಸವಿನೀರ ಕತೆಯಿದುವು ಸೋಜಿಗದ
ಕತೆಯಾಯ್ತು. ಸಂತಸದ ಸವಿಗಡಲ ಸೊದೆಯುಕ್ಕಿ
ಬಂದಂತೆ ಕನ್ನಡದ ಜನಪದಕೆ ಮುತ್ತಜ್ಜ
ನುದುರಿಸಿದ ಮುತ್ತು ಮಾಣಿಕವಾಗಿ ಕಾಳನಾ
ಹಿರಿಹೆಸರು ಕಾವ್ಯ ಕಾಣಿಕೆಯಾಯ್ತು.

ಹಿಂದೆ ಬಹು
ದಿನ ಹಿಂದೆ ಕುಡಿವ ನೀರಿನ ಕೊರತೆ ನಮ್ಮೂರಿ
ಗಾದಾಗ ಹಿರಿಯಪಂಚರು ಸೇರಿ ಬಾವಿಗಳ
ನಗಿಸಿದರು, ನೀರೆಲ್ಲವರ ಸವುಳು ; ಉಪ್ಪು.
ಅದ ಕುಡಿದು ಬಾಳವಕ್ಕಿಸಬಹುವೆ? ನಿರ್ವಾಹ
ವಿಲ್ಲವಲೆ ಕುಡಿವ ಜನ, ಜೇಸಿಗೆಯು ಕಾಲಿಡುವ
ಮುನ್ನವೇ ನೆಲೆಬತ್ತಿ ನೀರೊಣಗಿ ನಿಟ್ಟುಸಿರ
ಬಿಡುತಿರುವ ಬಾವಿಗಳ ಕಂಡಾಗ ಕಂಗೆಟ್ಟು
ನಿಲ್ಲುವರು. ನೀರಿನಾಸರಪಪ್ಪಿ ಹೌಹಾರಿ
ನಿಂತಜನ ಮೂರು ತಿಂಗಳ ಕಾಲ ನದಿತೀರ
ವನುಸೇರಿ ಜೀವನವ ನೂಕುವರು, ಕಾರು ಹನಿ
ಯುವವರೆಗೆ ನಮ್ಮೂರ ಮನೆಗಳಲಿ ಹೆಗ್ಗಣದ
ಓಡಾಟ, ಇಲಿಗಳದೆ ಸಂಸಾರ. ತುಂಬಿದಾ
ಮನೆಯಿಂದ ಹೆಂಡಿರನು ಮಕ್ಕಳನು ಗೋಳಿಡುವ
ಕೂಸುಗಳ ಕಟ್ಟಿಕೊಂಡೇಳುತಿಹ ಬಿರುನೋಟ,
ಪಾಳ್ನೆಲದ ಹಾಳುಹುಡಿ ತುಳಿಯುತ್ತಲೆಲ್ಲಿಗೋ
ಸಾಗುತಿಹ ಹಳ್ಳಿಗರ ಗೋಳಾಟ, ಎಂದಿಗಾ
ದರು ಮುತ್ತಿ ಬರಬಹುದೆ ನನ್ನೊಡಲಜೀವಿಗಳಿ
ಗೆಂದೆಂಬ ಭಾವವನು ತಳಿದಂತೆ ತೋರುತಿಹ
ಹಾಳುಸುರಿಯುವ ಹಳ್ಳಿ ನೆಲೆತಪ್ಪಿ ನಿಂತಂತೆ
ನಿಟ್ಟುಸಿರ ಬಿಡುವಾಗ ಕಣ್ಣ ಕೊರೆಯುವ ನೋಟ
ಪಾಪಕಲ್ಲೆದೆಯನ್ನು ಕರಗಿಸದೆ ಬಿಡಬಹುದು ?
ಜೇನಹುಳಗಳನುಳಿದ ಜೇನಹಲ್ಲೆಯು ತೆರದಿ
ನಿರ್ಜನವ ನಮ್ಮೂರು ಜೇಂಗುಡುತ ರಣಗುಟ್ಟಿ
ತೆರೆವಾಯ ತೋರುವುದು. ವರುಷವರುಷದ ಗೋಳು
ವರುಷಕೂ ಹೆಚ್ಚಾಗಿ ಜನರಲ್ಲಿ ನಿಲ್ಲುವದೆ
ಸಾಹಸದ ಮಾತಾಯ್ತು. ಜೇನುರಸವಿಲ್ಲದಿಹ

ಜೇಂಗೊಡವನಪ್ಪಿದರೆ ಬದುಕುವವೆ ಜೇನುಗಳು ?
ಜೀವರಸ ಬತ್ತಿದರೆ ಬಾಳುವವೆ ಜೀವಿಗಳು ?
ಬದುಕುವವೆ ಪ್ರಾಣಿಗಳು ?

ಈ ಗೋಳ ತಪ್ಪಿಸಲು
ಹಿರಿಯುಪಂಚರು ಮತ್ತೆ ಚಾವಡಿಯಲೊಂದುದಿನ
ಚರ್ಚೆಯನು ಹೂಡಿದರು. ಹಾರುವರು ಜಂಗಮರು
ರೈತಾಳುಗಳು ಬಂದು ಸಭೆಯಲ್ಲಿ ಸೇರಿದರು.
ನಮ್ಮೂರ ಪಡುವಣದ ಕಡೆಯಂಚಿನೆಡೆಯಲ್ಲಿ
ಹಿರಿಯ ಹೊಂಡವನಗಿದು ಕಟ್ಟಿಸುವ ತೀರ್ಮಾನ
ಮಾಡಿ ಹಿಗ್ಗಿದರಂದು. ನೀರಬರ ತಗ್ಗಿತೆನೆ
ಹಿಗ್ಗಲಾರರೆ ಜನರು ? ಒಡವ ಬಲ್ಲಿದರೆಲ್ಲ
ಕೊಡುಗಯ್ಯ ದೊರೆಯಾಗಿ ಹಣದಹೊಳೆ ಹರಿಸಿದರು.
ಕೂಲಿಕುಂಬಳಿಗಾಗಿ ಕಣಜಗಳ ತೆರೆತೆರೆದು
ಸಂತಸದ ಸಂಭ್ರಮದಿ ಕಾಳುಗಳ ಕೊಡುವಾಗ
ರೈತಾಳುಗಳ ಹಿಗ್ಗ ಬಣ್ಣಿಸುವದೆನ್ನಳವೆ ?
ಮುಂಗಾರ ಮೋಡಗಳು ಕೋಲ್ಮಿಂಚನಾಗಸದಿ
ಸೆಳೆವ ಮುನ್ನವೆ ಹೊಂಡ ಮೇಘರಾಜನ ದಯೆಯ
ದಾರಿಯನ್ನೀಕ್ಷಿಸುವ ಪಕ್ಷಿಚಾತಕವಾಯ್ತು.
ಕೆರೆಯ ಕೆಲಸಕೆ ನಿಂತ ಜನವೇನು ಕಡಿಮೆಯೇ ?
ಊರಗೌಡನು ತಾನೆ ಸನಿಕೆಯಿಂ ತೋಡಿದರೆ
ಶಾನುಭೋಗನು ಬಂದು ಹಾರೆಯನು ಮಿಾಟುವನು.
ಮಕ್ಕಳಾಟವದಾಯ್ತು ಮಣ್ಣನೆತ್ತುವ ಕೆಲಸ.
ಕೊಡುವ ದೊರೆಗಳು ತಾವೆ ದುಡಿವ ಕುಳಗಳ ತೆರದಿ
ಮೈಮುರಿಯೆ ದುಡಿದಾಗ, ಕೆರೆಯ ಕೆಲಸವೆ ತಮ್ಮ
ಮನೆಗೆಲಸವೆಂದೆಂಬ ಭಾವದಲಿ ನಮ್ಮೂರ
ಜನವೆಲ್ಲ ಮನದುಂಬಿ ದುಡಿವಾಗ, ಮೂರುವರು
ಷದಕೆಲಸ ನೂರುದಿನದವಧಿಯಲಿ ಮುಗಿದುದೇ

ನಚ್ಚರಿಯೆ ? ಮುಂಗಾರ ಮುನ್ನವೇ ಕಟ್ಟೆಮುಗಿ
ಸಿದುದಾಯ್ತು, ಕೆರೆಗೆ ಸಿಂಗರವಾಯ್ತು.
ಶಾಸ್ತ್ರೋಕ್ತ
ವಿಧಿಯಲ್ಲಿ ವಾಸ್ತುಪೂಜೆಯುಗೆಯ್ವ ಹಾರುವರ
ಮಂತ್ರಗಳ ಘೋಷಣೆಗೆ ಮುಗಿಲೊಡ್ಡು ಬೆದರಿತೇ
ನೆಂಬಂತೆ ಹನಿಯ ತೊಡಗಿತು ಮುಗಿಲು. ಗುಡ್ಡದೋ
ರೆಯಹಳ್ಳ ನೆರೆಯೆದ್ದು ಬಂದಾಗ ನಮ್ಮೂರ
ಕೆರೆತುಂಬಿ ತುಳುಕಾಡುತಿರುವಾಗ ನೀರ ಬರ
ಹಿಂಗಿಮುದು ನಿಚ್ಚಳದಿ ಕಂಡಾಗ ಹಿಗ್ಗಿದರು
ಹಳ್ಳಿಗರು ; ಹಿಗ್ಗಿ ಕುಣಿದಾಡಿದರು.
ಅಂದಿನಾ
ದಿನ ಮೊದಲು ನೇಸರುದಿಸುವ ಮುನ್ನ ನೆರೆದು ನಿಂ
ತಿತು ಜನವು, ಕೆರೆಯು ನೀರನು ತರುವ ಸಿಂಗಾರ
ದುಬ್ಬಿನಲಿ. ವಾದ್ಯಗಳ ಮೇಳದಲಿ ಕಾಳಿ ಕೂ
ಗುತಲಿರಲು ಕುಂಕುಮಾಂಕಿತರಾಗಿ ಬಂದ ಮು
ತ್ತೈದೆಯರು ಬಣ್ಣಬಳಿದಿಹ ಕೊಡದಿ ಮೆರವಣಿಗೆ
ಹೊರಟಾಗ ಹಿರಿಯುಪಂಚರ ಹಿಗ್ಗು ಹುಚ್ಚುಹೊಳೆ
ಹರಿದಂತೆ ನಗೆಯ ನೊರೆತೆರೆಯಲ್ಲಿ ತೇಲಾಡಿ
ತೆನ್ನುವದು ಅಚ್ಚರಿಯ ಮಾತಲ್ಲ. ಹೊಂಡದೆಡೆ
ಯನುಸೇರಿ ನೀರ ಪೂಜೆಯುಗೆಯ್ದು ಸಂತಸದ
ಸಂಭ್ರಮದಿ ಶಾನುಭೋಗರು ಬಂದು ಬೊಗಸೆಯಲಿ
ನೀರೆತ್ತಿ ಕುಡಿದು ಮುಗಿಸುವಮೊದಲೆ ಮೋರೆಯನು
ಕಿವುಚಿದರು. ಸಂಭ್ರಮದ ನೊರೆಹಾರಿ ಹೋದಂತೆ
ಕಿರಿಚಿದರು. ಸರಪಂಚ ಸೆಟ್ಟಿಯನು ಕರೆದು ಹೇ
ಳಿದರವರು " ನೀರೆಲ್ಲವರೆಸವುಳು " ! ಸೆಟ್ಟಿ ಹೌ
ಹಾರಿದನು. ಭಟ್ಟರನು ಕೂಗಿದನು. ' ಮಂತ್ರಪೂ
ರಿತ ನೀರಿಗೆಲ್ಲಿ ಬಂತೋ ಸವುಳು ? ವಾಸ್ತುಪೂ

ಜೆಯಲೇನು ಕುಂದು ಕಂಡಿಹಿರೇನು ಹೇಳಬಾ
ರದೆ' ಎನುತ ಮರಮರನೆ ಮರುಗಿದನು. ದುಗುಡಮುಂ
ಬಿದ ಮನದಿ ಶಾನುಭೋಗರು ಬಂದು ಜಂಗಮ
ಯ್ಯನಿಗೆರಗಿ ಕೇಳಿದರು. "ಸಾವು ಪಟ್ಟಿಹ ಕಷ್ಟ
ಕೀಸೀರೆ ಕಟ್ಟತ್ತೆ? ಜಂಗಮಯ್ಯರೆ ಹೇಳಿ!
ನಮ್ಮೂರ ಪಾಪವನು ತೊಳೆವ ದಾರಿಯ ತೋರಿ
ಕಾಪಾಡಲಾರಿರೇ! ಊರಮಕ್ಕಳಿಗೆಲ್ಲಿ
ಸೀರಿನಾಸರ ಸ್ವಾಮಿ? ಮೂಕದನಗಳಿಗಾವ
ಸವಿಸೀರಿನೊರತೆಯಿದೆ?" ಮುಮ್ಮಲನೆ ಮರುಗಿದರು
ಶಾನುಭೋಗರು ಕರಗಿ. ಸವಿಸೀರ ಸವಿಗಾಗಿ
ಬಾಯ್ದೆರೆದು ಬಂದಜನ ಕಹಿನೀರ ಕೊಂಡೊಯ್ವ
ನೋಟ ಕೆರಳಿಸಿತೇನೊ ಭಟ್ಟರನು, ಗುಡುಗಿದರು.
ಭಟ್ಟರಾ ಬಿರುಸರಕೆ ಭಯವಾಂತ ಜಂಗುಳಿಯು
ಕೈಮುಗಿದು ಕೇಳಿದರು ಗುಡಗಿನಾ ದನಿಯಿದನು.
"ಹೊಲೆಯ ಮುಟ್ಟಿದನೀರು ಹೊಲೆಯಾಗದಿರಬಹುದೆ?
ನಮ್ಮೂರ ಹೊಲೆಯರಲಿ ಮುಟ್ಟಾಳನಾವನೋ
ಮುಟ್ಟಿ ಹೊಲೆಗೆಡಿಸಿದನು ಸವಿನೀರ ಕೆರೆಯಿದನು.
ಸಾವೆದುರು ಕುಣಿವಂತೆ ಸವಿಸೀರ ಕುದಿಯುತಿದೆ
ಸಾಗಿರಲೆ ಪಾಪಿಗಳೆ! ಚಂಡಾಲರಿಂದೆಮ್ಮ
ಹೊಂಡ ಕಲುಷಿತವಾಯ್ತು."
ಸಿಡಿಲಿನಬ್ಬರದಿಂದ
ನುಡಿದ ನುಡಿಯನು ಕೇಳಿ ಕಂಗೆಟ್ಟು ನಿಂತ ಜನ
ಹೊಲೆಯರನು ದೂರಿದರು. ಮನವಾರೆ ತೆಗಳಿದರು.
ಗೌಡ ತೇಗುತ ಬಂದು "ಆದುದಾಯಿತು ಸ್ವಾಮಿ!
ಮಿಂಚಿಹೋಗಿಹ ಮಾತ ಮತ್ತೆ ನೆನೆಯುತಲುರಿಯೆ
ಕಹಿಸೀರು ಸವಿಯಾಯ್ತೆ? ಧರ್ಮವಂತರು ನೀವು
ಧರ್ಮದಾದೇಶದಲಿ ಧರ್ಮಕರ್ಮವನೆಸಗಿ

ಕೊಚ್ಚಿಬಂದಿಹ ಕೊಳೆಯು ತೊಳೆಯಬಾರದೆ ಜವದಿ ”
ಎಂದುಸುರಿ ಬಾಗಿದನು. “ ಭೂತಬಲಿ ಬೇಕಿದಕೆ
ಸಾವಿರೆಳಗಾಯಿಗಳ ನೀರುಸುರಿಯಲು ಬೇಕು
ಮನೆಮನೆಯೊಳೆಲ್ಲರೂ ಪಾಯಸದ ಎಡೆಮಾಡಿ
ಹಗಲು ತೀರುವ ಮುನ್ನ ಹೊಂಡಕೆಸೆಯಲುಬೇಕು
ಹೊಲೆಯರೆನ್ನುವರಿತ್ತ ತಪ್ಪಿಬಂದರು ಕೂಡ
ತಲೆದಂಡವಿಡಬೇಕು. ಹೊಲೆಯ ಕಲೆಸಿದ ಹೊಲೆಗೆ
ಕೊಲೆಯೆ ಮದ್ದಾದೀತು” ನೋಡೆಂಬ ನುಡಿಕೇಳಿ
ಜನಮೆಚ್ಚಿ ಭಟ್ಟರನು ಕೊಂಡಾಡಿ ಚೆದರಿದರು.
ಪಾಯಸದ ಸವಿಗಾಗಿ ಬಾಯಿನೀರೂರಿರಲು
ಜನವಲ್ಲಿ ನಿಂತೀತೆ ?

ಜನವೆಲ್ಲ ಚೆದರಿದರು

ಚೆದರಲಿಲ್ಲವು ಕಾಳ. ಹೊಂಡದಾಚೆಯ ಕಡೆಗೆ
ಮೌನಮುಖ ಮುದ್ರೆಯಲಿ ಕಣ್ಣೀರು ಜಾರುತಿರೆ
ನಿಂತು ದಣಿಯುವ ಕಲ್ಲುಬೊಂಬೆಯಂತೀ ವ್ಯಕ್ತಿ
ನಿಂತಲ್ಲಿ ನಿಲವನೇ ಮರೆತಂತೆ ಕಾಣುತಿದೆ.
ತುಟಿ ಮೀರದಿದ್ದರೂ ತುಟಿಯ ತೆರೆಮರೆಯಲ್ಲಿ
ಮಾತಿನಾ ಹೆಣವೆದ್ದು ಭೂತನುಡಿಯಾಡುತಿದೆ.
“ ಊರಹಸನಾಗಿಡುವ ಊರಹೊಲೆಯರು ನಾವು
ನೀರನೆಡೆಗೈತರಲು ನೀರೆಂತು ಕಹಿಯಾಯ್ತು.... ?
ಕಪ್ಪು ಕುಲದವರೆಲ್ಲ ಗಂಗೆಯಲಿ ಮಿಂದಾಗ
ರುಚಿಗೆಟ್ಟು ನಿಂತಳೇ ಮಾತಾಯಿ ಮಾಗಂಗೆ ?
ಮಾತಿಗರ್ಥವನಿತ್ತ ನಮ್ಮೂರ ಜನರಿಂದು
ಭೂತಬಲಿಯಿಕ್ಕುವರು. ಪಾಯಸವನೆಸೆಯುವರು.
ಭಟ್ಟರೆಳೆದಿಹ ಬರೆಗೆ ನಮ್ಮೂರ ಹೊಲೆಜಾತಿ
ಕತಕತನೆ ಕುದಿವಾಗ ನೀರು ಸವಿಯಾದೀತೆ ?
ಹೊಲೆಯ ಕಲೆಸಿದ ಹೊಲೆಗೆ ಹೊಲೆಯನೇ ಬಲಿಯಾಗೆ

ನುಡಿದ ನುಡಿಯನು ಕೇಳಿ ಪರಪಂಚನಲ್ಲಿಯೇ
ನಿಂತು ಕೇಳುತಹಲಿಹನು ಕಾಳನಾಕಿವಿಮಾತು.
ಕಾಳನೆಲ್ಲಿಗೊ ಸರಿದು ಬಹುದೂರ ಹೋದರೂ
ಪರಪಂಚನಲ್ಲಿಯೇ ನಿಂತು ನೋಡುತಲಿದ್ದ
ಬಹುದೂರ ಹಬ್ಬಿರುವ ಹೆದ್ದಾರಿ ಮಾರ್ಗದಲಿ
ಮಸುಕಾಗಿ ಕಾಣುತಿಹ ಕಾಳನಾ ಮೂರ್ತಿಯನು.

ಮೂರು ತಿಂಗಳಕಾಲ
ಬೇಸಿಗೆಯ ಬೇಗೆಯುರಿಯಲಿ ಬೆಂದ, ಮಡದಿ ಮ
ಕ್ಕಳ ಗೋಳಿನುಪುರ ಜಳದಲಿ ಮಿಂದ, ನೆಲೆತಪ್ಪಿ
ನಿಂತಿರುವ ಹಕ್ಕಿಗಳ ತೆರದಿಂದ, ನದಿಯ ತೀ
ರವ ಸೇರಿ ಬಾಳನೆಳೆಯುವ ಜನರ ಗೋಳ ಬ
ಣ್ಣಿಸಲಳವೆ? ಬಾಡಿಬತ್ತಿದರವರು, ಕೊರಗಿ ಸೊರ
ಗಿದರವರು. ಜೀವನದೊಳಾವ ಸೊಗ ಕಂಡಾರು?

ಅಂದು ನಡುರಾತ್ರಿಯಲಿ
ಕತ್ತಲೆಯ ಬಿತ್ತನೆಯ ಬಿತ್ತರಿಸಿ ನಿಂತಾಗ
ಕಾಳಿರುಳ ಹೊದಿಕೆಯಲಿ ಜಗ ನಿದ್ದೆಗೆಯ್ಯುತಿರೆ
ಮುಗಿಲೊಡ್ಡುಗಳು ಗುಡುಗಿ ಕೋಲ್ಮಿಂಚ ಕಟೆಯುತಿರೆ
ರಣರಂಗದಾವೇಶ ಮೈದುಂಬಿ ಬಂದಂತೆ
ಬಾಂಬಯಲ ರಣದಲ್ಲಿ ಮುಗಿಲ ದಂಡುಗಳೆಲ್ಲ
ಗುಡುಗಿನಬ್ಬರದಲ್ಲಿ ಸಿಡಿಸಿಡಿದು ನಿಂತಂತೆ
ಭೀಕರಾಕಾರದಲಿ ಭಯಬಿತ್ತಿ ಮೊಳಗುತಿರೆ
ಕಾಳನೆದ್ದನು ಬೇಗ.

ಜಗದ ದಾಹವೆ ಕರಗಿ
ನೀರಾಗಿ ಬರುವಂತೆ ನಿಂತ ನೀರದಗಳಿಗೆ
ತಲೆವಾಗಿ ವಂದಿಸಿದ. "ನಿಮ್ಮ ಪುಣ್ಯದ ನೀರು
ನನ್ನ ಪುಣ್ಯಕೆ ಬರಲಿ" ಎಂದುಸುರಿ ಕೈಮುಗಿದ.
ಮನೆಯದೇವರ ನಮಿಸಿ ಹೊರಬಿದ್ದು ಬರುವಾಗ

ಹಾದಿಯಲಿ ಮಲಗಿರುವ ಮಡದಿ ಮಕ್ಕಳ ಕಂಡು
ಚಣಕಾಲ ಯೋಚಿಸಿದ. ಮೂರು ಮಕ್ಕಳತಾಯಿ
ಕಾಳನೆದೆ ಕೆಣಕಿದರು ಸಿರ್ಧಾರ ಕವಚದಲಿ
ಮುನ್ನಡೆದ ಹೆಜ್ಜೆಯಲಿ ಹಿಂಜೋಲಿ ತರವಲ್ಲ
ವೆಂದುಕೊಂಡನು ಕಾಳ. ಮಡದಿಮಕ್ಕಳ ನಮಿಸಿ
ಮೂರುಸಲ ಬಲವಂದು ಕೊನೆಯಕಣ್ಣಿನ ಹನಿಯ
ಮುಡಿಪ ಸಲ್ಲಿಸಿ ನಿಂತು ನೆಟ್ಟನೇ ಹೊರವಂಟ.

ಮುಗಿಲು ಗುಡುಗಿತು ಭಯದಿ
ಬಯಲು ನಡುಗಿತು ಜವದಿ, ಜೀವ ಝಲ್ಲೆನುವಂತೆ
ಸಿಡಿಲಿನಬ್ಬರವಾಯ್ತು. ನಡೆವ ಕಾಳನ ನಡೆಗೆ
ಮುಗಿಲೊಡ್ಡು ನಡುಗಿತೋ ನುಡಿವ ಕಾಳನ ನುಡಿಗೆ
ಕೋಲ್ಮಿಂಚು ಕರಗಿತೋ ಹೇಳಬಲ್ಲವರಾರು ?
ನಡೆದಂತೆ ಹನಿಯುದಿಸಿ ಬಿರುಮಳೆಯ ಸರವೆದ್ದು
ಮುಗಿಲವೋಡಗಳೆಲ್ಲ ನೆಲದ ಹಳ್ಳಗಳಾಗಿ
ಕಾಡ ಬಿರುಕುಗಳೆಲ್ಲ ನೀರ ಬಾವಿಗಳಾಗಿ
ನೊರೆಯೆದ್ದು ಬರುತಿರುವ ಹೊನಲುಹೊಂಡವಹೊಕ್ಕು
ತುಂಬಿ ತುಳುಕಾಡಿಸಿತು.

ಬಾನು ತಿಳಿಯುವ ಮುನ್ನ
ಕೆರೆಯ ದಡವನು ಸೇರುತಲ್ಲಿ ಗಿಡದಡಿಯಲ್ಲಿ
ರಂಗು ಹೊಯ್ಯುತಲಿರುವ ಕಾಳನೆದೆಯಲಿ ಹರುಷ
ತುಂಬಿ ಸೂಸುತಲಿಹುದು, ಕಾರೊಡಲು ಹರಿದಂತೆ
ಹರಿವ ಹಳ್ಳದ ನೀರು ಹೊಂಡವನು ಹೊಗುವಾಗ
ಕಾಳ ಕುಣಿಯುತಲಿಹನು, ನಟ್ಟದಿಟ್ಟಿಯಲದನು
ನೋಡಿ ನಲಿಯುತಲಿಹನು. ಭೋರೆಂದು ಮೊರೆಯುತಿಹ
ಕೆರೆಯ ತೆರೆಗಳು ತನ್ನ ಕೈನೀಡಿ ಕರೆವಂತೆ
ಭಾಸವಾಗುತಲಿರಲು ಕಾಳ ಹಿಗ್ಗುತಲಿಹನು.

ಅಲ್ಲಿ ಗಿಡದಡಿಯಲ್ಲಿ

ಹದಗೆಟ್ಟ ಹೊಲೆಜಾತಿಗೊಂದುನೆಲೆ ಬಂದೀತು
ನನ್ನ ಮೂಳೆಗಳೆಲ್ಲ ಹೊಂಡದಲಿ ಪುಡಿಯಾಗ
ಲೆನ್ನಜಾತಿಯ ಜನರು ಸವಿಸೀರ ಕಂಡಾರು.
ನನ್ನವರನಾದರಿಸಿ ಹೊಲೆಯ ಕೊಳೆ ತೊಳೆದಾರು !
ಹೊಲೆಯ ಮಟ್ಟಿದ ನೀರು ಕಹಿಯೆಂಬ ನುಡಿಯಡಗಿ
ಹೊಲೆಯನಿತ್ತಿಹ ನೀರು ಸವಿಯಾಗಿ ನಿಂತೀತು.
ಪಾಯಸವೆ ಭೂತಬಲಿ ? ನರಬಲಿಯೆ ಭೂತಬಲಿ.
ಕಾಳ ನುಡಿದಿಹ ನುಡಿಯು
ತುಟಿಮೀರದಿದ್ದರೂ ಹೊಂಡದಲೆಗಳು ಕೇಳಿ
ಹೊರೆಯೇರಿಬಂದಂತೆ ತೆರೆಗಳೇರುತ ಕೆರೆಯ
ದಡವನಪ್ಪಳಿಸಿದುವು.
ಸಾವಿರೆಳಗಾಯಿಗಳ
ಪಾಯಸದ, ಲಡ್ಡುಗೆಯ ಸವಿಯಾದ ಭೂತಬಲಿ
ಕೆರೆಯೊಡಲ ಹೊಕ್ಕಾಗ ಸೀರ ಸವಿಯುಂತಿರಲಿ
ಫಾಲ್ಗುಣದ ಮುನ್ನವೇ ಕೆರೆಬತ್ತಿ ಕಟಕಾಯ್ತು.
ಭೂತಬಲಿಯನು ತಿಂದ ಕೆರೆಗಾವ ದಾಹವೋ
ನೀರೆಲ್ಲವೀಂಟಿದರು, ನೀರೆಲ್ಲಿ ? ಬೇಕೆಂದು
ತೆರೆಮೊಡಲ ತೋರಿಸಿತು.
ಕೆರೆಯ ದಾಹದ ಸೊಲ್ಲು
ಊರಮನೆ ಹೊಕ್ಕಂತೆ ಕೇರಿಕೇರಿಗಳಲ್ಲಿ
ಗಂಟಲೊಣಗಿದ ಜನರು ನದಿಯ ತೀರವ ತಮಗೆ
ನೀರಿನಾಸರವೆಂದು ಚಡಪಡಿಸಹತ್ತಿದರು.
ಮುನ್ನ ಕೂಡಿದ ಸಂತೆ ಮುಚ್ಚಂಜೆ ಹೊತ್ತಿನಲಿ
ಮುಂದಾಗಿ ಹರಿವಂತೆ ಜನವೆಲ್ಲ ಚೆದರಿದರು.
ಸರಪಂಚನಿದನೋಡಿ ತೆರದಹೊಂಡದ ಕಡೆಗೆ
ಬಿರುಗಣ್ಣ ಬಿಡುವಾಗ ಹೊಲೆಯ ಕಾಳನ ಕಂಡು
ಬುಸುಗುಟ್ಟತೊಡಗಿದನು. ಹೊಲೆಯ ಕಾಳನು ನಕ್ಕು

ಹೇಳಿದನು “ ಒಡೆಯರೇ ! ಹೊಲೆಜಾತಿ ಹೊಲೆಯಲ್ಲ
ವೇಕಿಂತು ಹಳಿಯುವಿರಿ ? ದೇವನಿತ್ತಿಹ ಜನ್ಮ
ವೆಂದಿಗೂ ಶುದ್ಧವಿದೆ. ನೀರು ಬತ್ತಲಿಕೆಮ್ಮ
ದಾಹವೇ ಗುರಿಯಾಯ್ತು. ಹೊಲೆಯ ಮುಟ್ಟಿದ ನೀರು
ಹುಳಿಯಾಗಿ ಬಾಳುವದು, ಬತ್ತಿ ಕೆರೆ ಸುಕ್ಕುವದ
ನಂಬಬೇಕೇನೊಡೆಯ ? ಹೊಲೆಯನುಸುರಿನ ಜಳದಿ
ನಮ್ಮೂರ ಪಾಪವೇ ಭುಗಿಲೆಂದು ಉರಿಯುತಿರೆ
ದಾವರದ ವಯೆಯಾಯ್ತು” ಕಾಳ ಕಿಡಿಗಣ್ಣಿನಲಿ
ನುಡಿದ ನುಡಿಯನು ಕೇಳಿ ಸರಪಂಚನೆದೆಯಲ್ಲಿ
ಸುಡುಪಂಜು ಹತ್ತಿದರು ಮಾತಿನರ್ಥವನರಿದು
ತೆಪ್ಪಗಾದರು ಸೆಟ್ಟಿ. “ ನಮ್ಮೂರ ನೀರಬರ
ಹಿಂಗಬೇಡವೆ ಕಾಳ ? ಧರ್ಮದರಿ ಬಾಡಿದರೆ
ಕರ್ಮದರಿ ಹೊತ್ತೀತೆ ? ಹೊಲೆಯನಿಲ್ಲದ ಊರು
ಹೊಲೆಯೆಂಬ ಗಾದೆಯನು ಬಲ್ಲೆ ನಾನಾದರೂ
ಧರ್ಮಸೀಮೆಯಮೀರಿ ಹೊಲೆತನವು ಹೊಕ್ಕಾಗ
ಪಾಪದುಂಬಿದ ಜನಕೆ ತಾಪವೇ ಗತಿಯಾಯ್ತು”
ನೋಡೆಂಬ ನುಡಿಕೇಳಿ ಕಾಳ ನುಡಿದನು ಮತ್ತೆ
“ ನಮ್ಮೂರ ದಾವರಕೆ ಹೊಲೆಜಾತಿ ಹೊಣೆಯೆಂಬ
ಸೊಲ್ಲ ಕೇಳಲು ಕಾಳ ಹೊಲೆಮೆಯ್ಯನಿತ್ತಾನು
ನುಡಿಯದಿರಿ ನನ್ನೊಡೆಯ. ಬರುವ ವರುಷದ ನೀರು
ಹರಿಗಡಿಯದಂತಾನು ದೇವರನು ಕೇಳಿಹೆನು.”
ಆತುರದ ದನಿಯಲ್ಲಿ ಸರಪಂಚ ಕೇಳಿದನು
“ ನಮ್ಮೂರ ಕೆರೆಯಲ್ಲಿ ನೀರು ಬತ್ತದೆ ಮುಂದು ?
ಸಕ್ಕರೆಯ ಹಿಡಿಯಿಂದ ಬಾಯಿ ಸವಿಮಾಡುವೆನು
ಸತ್ಯವೇ ಕಾಳಪ್ಪ ! ” “ ಕಾಲಗರ್ಭದಲೇನು
ಹುದುಗಿಹುದೊ ನೋಡೋಣ ” ವೆಂದೆನುತ ಕಾಳಪ್ಪ
ಮಿಂಚಿ ಹೋದನು ದೂರ. ದೇವನುಡಿಯಾದಂತೆ

ನುಡಿದ ನುಡಿಯನು ಕೇಳಿ ಸರಪಂಚನಲ್ಲಿಯೇ
ನಿಂತು ಕೇಳುತಹಲಿಹನು ಕಾಳನಾಕಿವಿಮಾತು.
ಕಾಳನೆಲ್ಲಿಗೊ ಸರಿದು ಬಹುದೂರ ಹೋದರೂ
ಸರಪಂಚನಲ್ಲಿಯೇ ನಿಂತು ನೋಡುತಲಿದ್ದ
ಬಹುದೂರ ಹಬ್ಬಿರುವ ಹೆದ್ದಾರಿ ಮಾರ್ಗದಲಿ
ಮಸುಕಾಗಿ ಕಾಣುತಿಹ ಕಾಳನಾ ಮೂರ್ತಿಯನು.

ಮೂರು ತಿಂಗಳಕಾಲ
ಬೇಸಿಗೆಯ ಬೇಗೆಯುರಿಯಲಿ ಬೆಂದ, ಮಡದಿ ಮ
ಕ್ಕಳ ಗೋಳಿನುಸುರ ಜಳದಲಿ ಮಿಂದ, ನೆಲೆತಪ್ಪಿ
ನಿಂತಿರುವ ಹಕ್ಕಿಗಳ ತೆರದಿಂದ, ನದಿಯ ತೀ
ರವ ಸೇರಿ ಬಾಳನೆಳೆಯುವ ಜನರ ಗೋಳ ಬ
ಣ್ಣಿಸಲಳವೆ? ಬಾಡಿಬತ್ತಿದರವರು, ಕೊರಗಿ ಸೊರ
ಗಿದರವರು. ಜೀವನದೊಳಾವ ಸೊಗ ಕಂಡಾರು?

ಅಂದು ನಡುರಾತ್ರಿಯಲಿ
ಕತ್ತಲೆಯ ಬಿತ್ತನೆಯ ಬಿತ್ತರಿಸಿ ನಿಂತಾಗ
ಕಾಳಿರುಳ ಹೊದಿಕೆಯಲಿ ಜಗ ನಿದ್ದೆಗೆಯ್ಯುತಿರೆ
ಮುಗಿಲೊಡ್ಡುಗಳು ಗುಡುಗಿ ಕೋಲ್ಮಿಂಚ ಕಟೆಯುತಿರೆ
ರಣರಂಗದಾವೇಶ ಮೈದುಂಬಿ ಬಂದಂತೆ
ಬಾಂಬಯಲ ರಣದಲ್ಲಿ ಮುಗಿಲ ದಂಡುಗಳೆಲ್ಲ
ಗುಡುಗಿನಬ್ಬರದಲ್ಲಿ ಸಿಡಿಸಿಡಿದು ನಿಂತಂತೆ
ಭೀಕರಾಕಾರದಲಿ ಭಯಬಿತ್ತಿ ಮೊಳಗುತಿರೆ
ಕಾಳನೆದ್ದನು ಬೇಗ.

ಜಗದ ದಾಹವೆ ಕರಗಿ
ನೀರಾಗಿ ಬರುವಂತೆ ನಿಂತ ನೀರದಗಳಿಗೆ
ತಲೆವಾಗಿ ವಂದಿಸಿದ. "ನಿಮ್ಮ ಪುಣ್ಯದ ನೀರು
ನನ್ನ ಪುಣ್ಯಕೆ ಬರಲಿ" ಎಂದುಸುರಿ ಕೈಮುಗಿದ.
ಮನೆಯದೇವರ ನಮಿಸಿ ಹೊರಬಿದ್ದು ಬರುವಾಗ

ಹಾದಿಯಲಿ ಮಲಗಿರುವ ಮಡದಿ ಮಕ್ಕಳ ಕಂಡು
ಚಣಕಾಲ ಯೋಚಿಸಿದ. ಮೂರು ಮಕ್ಕಳತಾಯಿ
ಕಾಳನೆದೆ ಕೆಣಕಿದರು ಸಿದ್ಧಾರ್ಥರ ಕವಚದಲಿ
ಮುನ್ನಡೆದ ಹೆಜ್ಜೆಯಲಿ ಹಿಂಜೋಲಿ ತರವಲ್ಲ
ವೆಂದುಕೊಂಡನು ಕಾಳ. ಮಡದಿಮಕ್ಕಳ ನಮಿಸಿ
ಮೂರುಸಲ ಬಲವಂದು ಕೊನೆಯಕಣ್ಣಿನ ಹನಿಯ
ಮುಡಿಪ ಸಲ್ಲಿಸಿ ನಿಂತು ನೆಟ್ಟನೇ ಹೊರವಂಟ.
ಮುಗಿಲು ಗುಡುಗಿತು ಭಯದಿ
ಬಯಲು ನಡುಗಿತು ಜವದಿ, ಜೀವ ಝುಲ್ಲೆನುವಂತೆ
ಸಿಡಿಲಿನಬ್ಬರವಾಯ್ತು. ನಡೆವ ಕಾಳನ ನಡೆಗೆ
ಮುಗಿಲೊಡ್ಡು ನಡುಗಿತೋ ನುಡಿವ ಕಾಳನ ನುಡಿಗೆ
ಕೋಲ್ಮಿಂಚು ಕರಗಿತೋ ಹೇಳಬಲ್ಲವರಾರು ?
ನಡೆದಂತೆ ಹನಿಯುದಿಸಿ ಬಿರುಮಳೆಯ ಸರವೆದ್ದು
ಮುಗಿಲವೋಡಗಳೆಲ್ಲ ನೆಲದ ಹಳ್ಳಗಳಾಗಿ
ಕಾಡ ಬಿರುಕುಗಳೆಲ್ಲ ನೀರ ಬಾವಿಗಳಾಗಿ
ನೊರೆಯೆದ್ದು ಬರುತಿರುವ ಹೊನಲುಹೊಂಡವಹೊಕ್ಕು
ತುಂಬಿ ತುಳುಕಾಡಿಸಿತು.
ಬಾನು ತಿಳಿಯುವ ಮುನ್ನ
ಕೆರೆಯ ದಡವನು ಸೇರುತಲ್ಲಿ ಗಿಡದಡಿಯಲ್ಲಿ
ರಂಗು ಹೊಯ್ಯುತಲಿರುವ ಕಾಳನೆದೆಯಲಿ ಹರುಷ
ತುಂಬಿ ಸೂಸುತಲಿಹುದು, ಕಾರೊಡಲು ಹರಿದಂತೆ
ಹರಿವ ಹಳ್ಳದ ನೀರು ಹೊಂಡವನು ಹೊಗುವಾಗ
ಕಾಳ ಕುಣಿಯುತಲಿಹನು, ನಟ್ಟದಿಟ್ಟಯಲದನು
ನೋಡಿ ನಲಿಯುತಲಿಹನು. ಭೋರೆಂದು ಮೊರೆಯುತಿಹ
ಕೆರೆಯ ತೆರೆಗಳು ತನ್ನ ಕೈನೀಡಿ ಕರೆವಂತೆ
ಭಾಸವಾಗುತಲಿರಲು ಕಾಳ ಹಿಗ್ಗುತಲಿಹನು.
ಅಲ್ಲಿ ಗಿಡದಡಿಯಲ್ಲಿ

ರಂಗವಲ್ಲಿಯಹೊಯ್ದು ರಂಗಮಂಡಪದಲ್ಲಿ
ಕಾಳನಾ ಕುಲದೇವಿ ಕುಂಕುಮಾಂಕಿತಳಾಗಿ
ವನಕುಸುಮ ರಾಜಿಯಲಿ ಬನದಮ್ಮ ಕುಳಿತಂತೆ
ಬಂದು ಕುಳಿತಿಹಳಲ್ಲಿ, ನಟ್ಟ ನಡುರಾತ್ರಿಯಲಿ
ಕೆರೆಯೆದ್ದು ಮೊರೆಯುತಿರೆ ಸಿರ ಜೀರಲೆ ತಾವು
ಜೀಯೆಂದು ಜಿನುಗುತಿರೆ ಕಾಳ ಮೈಯ್ಯಿಕ್ಕಿದನು
ಕಾಳಮ್ಮನ ನಡಿಗಳಲಿ. ಬಲವಂದು ಬೇಡಿದನು
ವರವನೊಂದನೆ ತಾನು. "ಹೇ ದೇವಿ! ಕುಲ ದೇವಿ!
ಹದಿನೆಂಟು ಜಾತಿಗಳ ಕೊಳೆಯ ತೊಳೆಯಲು ಹೊಲೆಯ
ಹೊಲೆಮೈಯ್ಯ ನಿಕ್ಕುವೆನು. ನರಬಲಿಯನಿತ್ತಾನು
ನೀರ ಸವಿ ಮಾಡುವೆನು. ನಮ್ಮೂರ ಹೊಂಡದಲಿ
ನನ್ನ ಮೂಳೆಗಳೆಲ್ಲ ಕರಗಿ ಕೂಡುತಲಿರಲು
ನೀರ ಸವಿ ಕೆಡದಿರಲಿ. ಹೇ ದೇವಿ! ಇಂದಿನಿಂ
ದೆಂದಿಗೂ ಮುಂದೆ ಎಂದೆಂದಿಗೂ ನಮ್ಮೂರ
ಬಾನಿನಲಿ ನೇಸರುದಿಸುವವರೆಗೆ, ತಿಂಗಳಿನ
ತಂಬೆಳಕು ತಿರೆಯ ತೀಡುವತನಕ ನಮ್ಮೂರ
ಹೊಂಡದಲಿ ನೀರು ಬತ್ತದೆ ಇರಲಿ. ಹೊಲೆಯ ಹೊಲೆ
ತನದಲ್ಲಿ ಹೊಲೆಗೆಟ್ಟಿತೆಂಬ ನುಡಿ ಹೊಲೆಯನಾ
ತ್ಮಾಹುತಿಗೆ ತಿಳಿಜಲವನಿತ್ತಾಗ ಜಾತಿಜಾ
ತಿಗಳೆಲ್ಲವೀ ನೀರ ಕುಡಿದಾಗ ವೆನ್ನಾತ್ಮ
ಶಾಂತಿಯಿದೆ; ಹೊಲೆತನದ ಮುಕ್ತಿಯಿದೆ, ಸಿದ್ಧಿಯಿದೆ."
ಕಾಳನೀಪರಿ ನುಡಿದು
ದೇವಿಯನು ಬಲವಂದು ಸಾಷ್ಟಾಂಗವೆರಗಿದನು.
ಮೂರು ಬೊಗಸೆಯ ನೀರನೇರಿಸಿಳಿಸುತ ಕಾಳ
ಮತ್ತೆ ಮೈಯ್ಯಿಕ್ಕಿದನು. ವರವ ನೀಡಲೆ ತಾಯಿ!
ವರವನೀಡೆಂದೆನುತ ಬುವಿಯೊಡಲು ಬಿರಿವಂತೆ
ಕೂಗಿಕೊಂಡನು ಕಾಳ.

ಮಾದೇವಿ ಮರುಗಿದಳೊ
ಭೂದೇವಿ ಕರಗಿದಳೊ ಬಾನದೇವಿಯು ತನ್ನ
ಬಕುತ ಕಾಳನ ಕಂಡು ಕಣ್ಣೀರ ಕರೆದಳೋ
ಕಾಳನಾ ಕುಲದೇವಿ ಪರವಸಿತ್ತೆನು ನಿನಗೆ
ನೋಡೆಂದು ತೋರಿಡಳೊ ಮತ್ತೆ ಹನಿಯಿತು ಮುಗಿಲು.
ದೇವಮಳೆಯಾದಂತೆ ಬಾನಕೊಳೆ ತೊಳೆದಂತೆ
ಬುವಿಯು ಬೆಳೆ ಬೆಳೆದಂತೆ ಕಾಳನಾ ಹೊಲೆತನವು
ಹಾಲಾಗಿ ಹರಿದಂತೆ ಮತ್ತೆಹರಿಯಿತು ನೀರು.
ದೇವಸನ್ನಿಧಿಯಿಂದ
ಲೆಪ್ಪ ಕಾಳನು ಬೇಗ ನಡುನೀರ ದಾಟಿದನು.
ಮೂರುಬೊಗಸೆಯನೀರ ಮುಕ್ಕುಳಿಸಿ, ಮದ್ದಾನೆ
ಹೊಕ್ಕರಣೆ ಹೊಕ್ಕಂತೆ ಗಂಭೀರ ಹೆಜ್ಜೆಯಲಿ
ಹೆಜ್ಜೆ ಕೀಳುತಲಿಹನು. ಮನೆಯಲ್ಲಿ ಕುಲಪತ್ನಿ
ತನ್ನ ಮಕ್ಕಳ ತಾಯಿ ಕಣ್ಣೆದುರು ಸುಳಿದರೂ
ಕಾಳನೇಂ ಕರಗಿದನೆ ? ಬೆದರಿದನೆ ? ಬೆಚ್ಚಿದನೆ ?
ಭೋರೆಂಬ ಕೆರೆಯೆ ತೆರೆ ನಡುಸುತ್ತಿ ಹೊಡೆಯುತಿರೆ
ಕಾಳನಾತ್ಮಾಹುತಿಗೆ ಕೆರೆಯ ಬುಡ ಬೆಚ್ಚುತಿರೆ
ಮುಗಿಲೊಡ್ಡು ಮೆಚ್ಚಿಗೆಯ ಮಳೆಹೂವ ಚೆಲ್ಲುತಿರೆ
ಕರವ ಜೋಡಿಸಿ ಕಾಳ ಮುಳುಗಿದನು. ಮುಳುಗಿದನೆ ?
ಮುಳುಗಿದನೆ ? ನೋಡದೋ ಕಾಳನೆದೆ ತೆರೆಯ ಮೇ
ಗಡೆಯಲ್ಲಿ ತುಲಕಾಡಿ ತೇಲುತಿದೆ. ಮತ್ತೆ ಮುಳು
ಗಿದನೆಂದು ಹೇಳದಿರು. ಕಾಣುವುದೆ ? ಕಾಳನಾ
ಬಿರುಗಣ್ಣು ಜಗವ ನೋಡುವ ರೀತಿ ! ನೋಡದೋ
ನೋಡಲ್ಲಿ ಕಾಳ ಗುಡುಗುತಲಿಹನು. ಪಾಯಸವೆ
ಭೂತಬಲಿ ? ನರಬಲಿಯೆ ಭೂತಬಲಿ. ಆತ್ಮಬಲಿ.
ಮುಗಿಲು ಗುಡುಗಿತು ಮತ್ತೆ,
ಬಾನುಮಳೆ ಬಿರುಸಾಯ್ತು. ಮುಗಿಲು ತಿಳಿಯಿತು ಮತ್ತೆ

*

ಬಾನೆಲ್ಲ ಬರವಾಯ್ತು. ಕಾಳನಾತ್ಮಾಹುತಿಯ
ಕೀರ್ತಿಯೇ ಬಂದಂತೆ ಬಾನಹೊಂದೇರಿನಲಿ
ನೇಸರುದಯವದಾಯ್ತು. ಹಕ್ಕಿ ಚಿಲಿಪಿಲಿಗುಟ್ಟಿ
ಹೊಂಡದೆಡೆಯಲಿ ಬಂದು ಸವಿನೀರ ಸ್ನಾನದಲಿ
ಹಿಗ್ಗಿನಾ ಹಾಲುಂಡು ಹಾರಾಡತೊಡಗಿದವು.
ಕೆರೆಯ ಬುಡದಲಿ ಕುಳಿತ ಕಾಳನಾ ನಗೆಗಡಲು
ತೆರೆಯ ಮೇಗಡೆಯಲ್ಲಿ ನೊರೆಯಾಗಿ ಹರಿಯುತಿರೆ
ನಮ್ಮೂರ ಜನರಂದು ಸವಿನೀರ ಸೀಂಟುತಿರೆ
ಕಾಳನಾತ್ಮವು ಶಾಂತಿ ಸಿದ್ದಿ ಪಡೆದಿತ್ತು.

* * *

ನಮ್ಮೂರ ಗೌಡರೂ
ಸರಪಂಚ ಸೆಟ್ಟರೂ ಬಿರುನುಡಿದ ಭಟ್ಟರೂ
ಹೊಂಡದೆಡೆಯನು ಸೇರಿ ಕಾಳನಾತ್ಮಾಹುತಿಗೆ
ಕಣ್ಣೀರ ಹಾಕಿದರು. ಜನರೆಲ್ಲ ಮರುಗಿದರು.
ಕೊನೆಗೆ ಭಟ್ಟರು ತಮ್ಮ ನಡುಗುತಿಹ ದನಿಯಲ್ಲಿ
ನೆರೆದ ಜನ ಸಂದಣಿಗೆ ಕೂಗಿ ಹೇಳಿದರಿಂತು :
" ಕಾಳನಾ ಹಿರಿಹೆಸರೆ ನಮ್ಮೂರ ಕೆರೆಗಿರಲಿ
ಹೊಲೆಯ ಕೊಳೆಯನೆ ತೊಳೆದ ಕಾಳನಾ ಹೊಲೆಜಾತಿ
ಹೊಕ್ಕು ತುಂಬಲಿ ಕೆರೆಯ ನಮ್ಮಪ್ಪ .. ಕಾ-ಳ-ಪ್ಪ
. . . . . . . . . . .
ನೆಂದೇನೊ ನುಡಿಯುತಿಹ ಭಟ್ಟರೆದೆ ತುಂಬಿಬರೆ
ಕಣ್ಣೀರು ಹೊನಲಾಯ್ತು. ನೆರೆದ ಜನಗಳ ಮರುಕ
ಮರುಕಳಿಸಿದಂತಾಗಿ ದಿಕ್ಕುದಿಕ್ಕುಗಳಲ್ಲಿ
ಬಿಕ್ಕು ಮಾರ್ದನಿಯಾಯ್ತು.

* * *

ಅಂದಿನಿಂದಿಂದಿಗೂ
ಕಾಳನಾ ಹಿರಿಹೆಸರೆ ನಮ್ಮೂರ ಕೆರೆಗಿಹುದು

*

ಕಾಳನ ಕೆರೆ

ನೀರಸವಿಯಂತಿರಲಿ ಬಿರುಬಿಸಿಲ ಬೇಗೆಗೂ
ಕಾಳನಾ ಕೆರೆಯಲ್ಲಿ ಹಸಿಯೊಂದು ಬತ್ತದಿಹುದಿಂದಿಗೂ ಈ ಹಿರಿಮೆ, ಘನಮಹಿಮೆ.
ಹಿರಿಯ ಹೆಸರನು ಹಾಡಿ
ಹೆಸರಿಟ್ಟು ಹರಸುತಿಹ ಹಿರಿಮೆ ಹೆಚ್ಚಿನದಲ್ಲ ;
ತನ್ನ ಜನಗಳಿಗಾಗಿ ತಾನೊಡಲತೆತ್ತುದದು
ಹೆಸರು ನಿಲ್ಲುವ ಗಳಿಕೆ.
ಜನಮುಮತೆಯದೆ ಘನತೆ.
ಈ ಹಿರಿಮೆ ಪಡೆವವರು ಸಾವಿರದೊಳೀಸುಜನ ?

ಬಾನೆಲ್ಲ ಬರವಾಯ್ತು. ಕಾಳನಾತ್ಮಾಹುತಿಯ
ಕೀರ್ತಿಯೇ ಬಂದಂತೆ ಬಾನಹೊಂದೇರಿನಲಿ
ನೇಸರುದಯವದಾಯ್ತು. ಹಕ್ಕಿ ಚಿಲಿಪಿಲಿಗುಟ್ಟೆ
ಹೊಂಡದೆಡೆಯಲಿ ಬಂದು ಸವಿಸೀರ ಸ್ನಾನದಲಿ
ಹಿಗ್ಗಿನಾ ಹಾಲುಂಡು ಹಾರಾಡತೊಡಗಿದವು.
ಕೆರೆಯ ಬುಡದಲಿ ಕುಳಿತ ಕಾಳನಾ ನಗೆಗಡಲು
ತೆರೆಯು ಮೇಗಡೆಯಲ್ಲಿ ಸೊರೆಯಾಗಿ ಹರಿಯುತಿರೆ
ನಮ್ಮೂರ ಜನರಂದು ಸವಿಸೀರ ಸೀಂಟುತಿರೆ
ಕಾಳನಾತ್ಮವು ಶಾಂತಿ ಸಿದ್ಧಿ ಪಡೆದಿತ್ತು.

* * *

ನಮ್ಮೂರ ಗೌಡರೂ
ಸರಪಂಚ ಸೆಟ್ಟರೂ ಬಿರುನುಡಿದ ಭಟ್ಟರೂ
ಹೊಂಡದೆಡೆಯನು ಸೇರಿ ಕಾಳನಾತ್ಮಾಹುತಿಗೆ
ಕಣ್ಣೀರ ಹಾಕಿದರು. ಜನರೆಲ್ಲ ಮರುಗಿದರು.
ಕೊನೆಗೆ ಭಟ್ಟರು ತಮ್ಮ ನಡುಗುತಿಹ ದನಿಯಲ್ಲಿ
ನೆರೆದ ಜನ ಸಂದಣಿಗೆ ಕೂಗಿ ಹೇಳಿದರಿಂತು :
" ಕಾಳನಾ ಹಿರಿಹೆಸರೆ ನಮ್ಮೂರ ಕೆರೆಗಿರಲಿ
ಹೊಲೆಯ ಕೊಳೆಯನೆ ತೊಳೆದ ಕಾಳನಾ ಹೊಲೆಜಾತಿ
ಹೊಕ್ಕು ತುಂಬಲಿ ಕೆರೆಯ ನಮ್ಮಪ್ಪ ...ಕಾ-ಳ-ಪ್ಪ
. . . . . . . . . . .
ನೆಂದೇನೊ ನುಡಿಯುತಿಹ ಭಟ್ಟರೆದೆ ತುಂಬಿಬರೆ
ಕಣ್ಣೀರು ಹೊನಲಾಯ್ತು. ನೆರೆದ ಜನಗಳ ಮರುಕ
ಮರುಕಳಿಸಿದಂತಾಗಿ ದಿಕ್ಕುದಿಕ್ಕುಗಳಲ್ಲಿ
ಬಿಕ್ಕು ಮಾರ್ದನಿಯಾಯ್ತು.

* * *

ಅಂದಿನಿಂದಿಂದಿಗೂ
ಕಾಳನಾ ಹಿರಿಹೆಸರೆ ನಮ್ಮೂರ ಕೆರೆಗಿಹುದು

*

## ಕಾಳನ ಕೆರೆ

ನೀರಸವಿಯಂತಿರಲಿ ಬಿರುವಿಸಿಲ ಬೇಗೆಗೂ
ಕಾಳನಾ ಕೆರೆಯಲ್ಲಿ ಹಸಿಯೊಂದು ಬತ್ತದಿಹು
ದಿಂದಿಗೂ ಈ ಹಿರಿಮೆ, ಘನಮಹಿಮೆ.
ಹಿರಿಯ ಹೆಸರನು ಹಾಡಿ
ಹೆಸರಿಟ್ಟು ಹರಸುತಿಹ ಹಿರಿಮೆ ಹೆಚ್ಚಿನದಲ್ಲ ;
ತನ್ನ ಜನಗಳಿಗಾಗಿ ತಾನೊಡಲತೆತ್ತುದದು
ಹೆಸರು ನಿಲ್ಲುವ ಗಳಿಕೆ.
ಜನಮುಮತೆಯುದೆ ಘನತೆ.
ಈ ಹಿರಿಮೆ ಪಡೆವವರು ಸಾವಿರದೊಳೇಸುಜನ ?

# ಅಮರ ಜ್ಯೋತಿ

೧

ಶತಕೋಟಿ ಜೀವಿಗಳ ಕಣ್ಣೀರ ಧಾರೆಯೊಳು
ನನ್ನೊಂದು ಹನಿ ನಿನಗೆ ಪುಣ್ಯ ಪುರುಷ !
ನೊಂದೆದೆಯು ಗರ್ಭದೊಳು ಬಿಸಿಯುಸಿರೆ ಮಿಡುಕುವೊಲು
ಕಣ್ತುಂಬಿ ಸೂಸುತಿದೆ ಪುಣ್ಯಪುರುಷ !

೨

ಕೋಟಿ ಮನಗಳ ಬೆಳಗಿ ಶತಕೋಟಿ ಹೃದಯಗಳ
ಹಣತೆಯೊಳು ಚಾಚಿರುವ ಅಮರಜ್ಯೋತಿ
ಕಣ್ಣೀರ ನೇಹದೊಳು ಹಚ್ಚಿ ಸಾಸಿರ ದೀಪ
ಬೆಳಗುತಿ-ಹುದಮಲಾತ್ಮ ದಿವ್ಯಜ್ಯೋತಿ.

೩

ಗಾಳಿಗೊಡ್ಡಿದ ಸೊಡರು ಮನೆಯ ಬೆಳಕನ್ನೊಮ್ಮೆ
ಕತ್ತಲೆಗೆ ಕೈದೂಡಿ ಸಿಲ್ಲಬಹುದು
ವಿಶ್ವಕೊಡ್ಡಿದ ಸೊಡರು ನಂದೀತೆ ಹೇಳೊಮ್ಮೆ
ಆವ ಗಾಳಿಯು ಹೊಡೆತ ಗೆಲ್ಲಬಹುದು.

೪

ಮನೆಯ ಬೆಳಗುವ ದೀಪವೆಂದಾರೆ ಆರಿದರೆ
ಹೃದಯ ಬೆಳಗುವ ದೀಪವಾರಬಹುದೆ ?
ಬಾಳ ಹಣತೆಯನೊಡೆದು ಬಾಳ ಕೈ ಬೀಸಿದರೆ
ವಿಶ್ವಬಾಳಿನ ದೀಪ ನಂದಬಹುದೆ ?

# ನೈದುಂಬಿದ ಪ್ರೇಮ

೧

ನೈ ದುಂಬಿದ ಪ್ರೇಮಾ । ತುಂಬಿದೆ ಭೂವ್ಯೋಮಾ ॥
ನೆಲ ಜಲದೊಳು
ಜನ ಮನದೊಳು
ತುಂಬಿ ತುಳುಕುತಿದೆ ಈ ಪ್ರೇಮಾ ;
ಜಗಜೀವನಧಾಮಾ.

೨

ಕಹಿ ಬಾಳಿಗೆ ಸವಿ ಜೀವನ ಸುಮನಾ
ಬುವಿಚೇತನಕಿದೆ ಪ್ರೇಮದ ಜನನಾ
ನೋವಿಗೆ ಸಾವಿಗೆ ಬೇಗುದಿ ಬವಣೆಗೆ
ಸುಧಾಂಶು ಲೇಪನವೀ ಪ್ರೇಮಾ ;
ಸಂಪ್ರೀತಿಯ ಧಾಮಾ.

೩

ಈ ನೆಲ ಕುಣಿಯಿತು
ಹೊಸ ಜಲ ನಲಿಯಿತು.
ಭೂತಳ ಹಾಡಿತು ನೈದುಂಬಿ;
ಪ್ರೇಮದ ರಸದುಂಬಿ

೪

ಸುರಿಯಿತು ಹಾಲು
ಹಸಿಯಿತು ಜೇನು
ಸವಿಯಾಯಿತು ಜೀವಾ
ಗರಿಗೆದರಿತು ಭಾವಾ
ನೈದುಂಬಿದ ಪ್ರೇಮಾ । ತುಂಬಿದೆ ಭೂ ವ್ಯೋಮಾ ॥

ಇದು

# ಸುದರ್ಶನ ಪ್ರಕಟನೆ



ಸುದರ್ಶನ ಪ್ರಕಾಶನ

ತಿಪಟೂರು